# ಹೊಸತುಡಿಕ್ಷ





ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆ

೧



ಸಂಪುಟ ೧ ಸಂಚಿಕೆ ೧ ಮೇ-ಜೂನ್

ಖಾಸಗಿ ಪ್ರಸಾರಕ್ಕಾಗಿ ೧೯೯೨

ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ

## ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ

ಬಹುದಿನಗಳ ಹಿಂದಿನಿಂದಲೂ ನಮ್ಮ ಹೈದ್ರಾಬಾದ ಕರ್ನಾಟಕದ ನೆಲದಿಂದಲೇ ಸಾಹಿತ್ಯಿಕ ಪತ್ರಿಕೆಯೊಂದನ್ನು ಹೊರತರುವ ಹಂಬಲ ನಮಗಿತ್ತು. ಇದೀಗ ನಮ್ಮ ಕನಸುಗಳಿಗೆ ರೂಪುಕೊಡಲು ನಿಮ್ಮ ಭಾವನೆಗಳನ್ನು ಅರಳಿಸಲು "ಹೊಸ ದಿಕ್ಕು" ಎನ್ನುವ ಸಾಹಿತ್ಯಿಕ ಪತ್ರಿಕೆಯೊಂದನ್ನು ಖಾಸಗಿ ಪ್ರಸಾರಕ್ಕಾಗಿ ಆರಂಭಿಸುತ್ತಿದ್ದೇವೆ.

ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವ ಈ ಹೈದ್ರಾಬಾದ ಕರ್ನಾಟಕ ಹಾಗೂ ನೆರೆಯ ಜಿಲ್ಲೆಗಳಾದ ಬಿಜಾಪುರ, ಬಳ್ಳಾರಿ ಜಿಲ್ಲೆಗಳಲ್ಲಿ ಪ್ರತಿಭೆಗಳಿಗೆ ಕೊರತೆ ಇಲ್ಲ. ಆದರೆ ಅವರನ್ನು ಗುರುತಿಸುವ, ಬೆಳೆಸುವ ವೇದಿಕೆಗಳ ಕೊರತೆ ಇಲ್ಲಿದೆ. ಈ ನಿಟ್ಟಿನಲ್ಲಿ ಹಲವಾರು ಪತ್ರಿಕೆಗಳು ಕಾರ್ಯ ನಿರತ ವಾಗಿದ್ದರೂ ಸಹ ದಿನೇ ದಿನೇ ಬೆಳೆಯುತ್ತಿರುವ ಬರಹಗಾರರನ್ನು ಪ್ರೋತ್ಸಾಹಿಸುವ ಪತ್ರಿಕೆಗಳ ಸಂಖ್ಯೆ ಈ ನೆಲದಲ್ಲಿ ಕಡಿಮೆ ಎಂದೇ ಹೇಳಬೇಕಿದೆ. ಆ ಕೊರತೆಯನ್ನು ತುಂಬುವಲ್ಲಿ ಕಿರುಪ್ರಯತ್ನ ನಮ್ಮದು.

ನಾಡಿನ ಹಿರಿಯ ಲೇಖಕರ, ಕವಿ-ಸಾಹಿತಿಗಳ, ಸಲಹೆ, ಮಾರ್ಗದರ್ಶನ ಚಿಂತನ ಜೊತೆಗೆ ಉಪಯುಕ್ತ ಸಂವಾದಕ್ಕೆ ವೇದಿಕೆ ಒದಗಿಸುವ ಮೂಲಕ ಯುವ ಪೀಳಿಗೆಯ ಬರಹಗಾರರನ್ನು ಗಟ್ಟಿಯಾಗಿ ರೂಪಿಸುವ ಬೆಳೆಸುವ-ಗುರುತಿಸುವ ಹಂಬಲ ನಮ್ಮದು. ಈ ಎರಡು ವರ್ಗದವರ ಮಧ್ಯೆ "ಹೊಸ ದಿಕ್ಕು" ಪತ್ರಿಕೆಯ ಮೂಲಕ ವೇದಿಕೆ ಒದಗಿಸುವ ಕೆಲಸವಷ್ಟೇ ನಮ್ಮದು. ತಮ್ಮ ತಮ್ಮ ಕ್ಷೇತ್ರದಲ್ಲಿ ಸಾಕಷ್ಟು ಸಾಧಿಸಿ ಹೆಸರುವಾಸಿಯಾದ ಲೇಖಕರು ಈ ಪತ್ರಿಕೆಯಲ್ಲಿ ಬರೆಯುವ ಮೂಲಕ ತರುಣ ಪೀಳಿಗೆಯ ಬರಹಗಾರರಿಗೆ ಸಾಹಿತ್ಯದ ಹಸಿವನ್ನು ತಣಿಸಬೇಕಿದೆ ಎಂದು ವಿನಂತಿಸುತ್ತೇವೆ. ಜೊತೆಗೆ ಇಲ್ಲಿಯ ಸಹೃದಯ ಓದುಗರು ಸಾಹಿತ್ಯಾಸಕ್ತರು, ಬರೆಯುವ ಹಂಬಲವುಳ್ಳವರು ಸಾಹಿತ್ಯಿಕ-ಸಾಂಸ್ಕೃತಿಕ ಲೋಕದ ಕಾಳಜಿವುಳ್ಳವರೆಲ್ಲರೂ ಈ ಪತ್ರಿಕೆ ನಮ್ಮದು ಇದರ ಜೊತೆಗೆ ನಾವು ಬೆಳೆಯೋಣ, ಬೆಳೆಸೋಣ. ಎಂಬ ಉದಾತ್ತ ವಿಚಾರದೊಂದಿಗೆ ಹೆಗಲು ಕೊಟ್ಟು ನಿಲ್ಲಬೇಕಿದೆ.

"ಹೈದ್ರಾಬಾದ ಕರ್ನಾಟಕ" ಎಂಬ ಹೆಸರಿನ ಹಿಂದೆಯೂ, ಉರ್ದು-ಮರಾಠಿ ಭಾಷೆಗಳ ಪ್ರಭಾವದ ಮಧ್ಯೆಯೂ ನಾವು ನಮ್ಮ ಕನ್ನಡತನವನ್ನು ಉಳಿಸಿಕೊಂಡು

ಬಂದಿದ್ದೇವೆ. ಅದನ್ನು ಬೆಳೆಸಿಕೊಂಡು ಹೋಗುವದಕ್ಕಾಗಿ "ಹೊಸ ದಿಕ್ಕು" ಸಿದ್ಧವಾಗಿ ನಿಂತಿದೆ. ಹಿರಿಯರ ಮಾರ್ಗದರ್ಶನದಲ್ಲಿ ತರುಣ ಪೀಳಿಗೆಯ ಬರಹಗಾರರು ಹಾಗೂ ವಿದ್ಯಾರ್ಥಿಗಳಲ್ಲಿಯ ಸುಪ್ತ ಪ್ರತಿಭೆಗಳನ್ನು ಬೆಳೆಸುವ ಹಂಬಲದೊಂದಿಗೆ ನಾಡಿನ ಸಾಹಿತ್ಯಿಕ ಮುಖ್ಯ ವಾಹಿನಿಯಲ್ಲಿ ಈ ನೆಲದ ಪಾಲೇನೂ ಕಡಿಮೆ ಇಲ್ಲ ಎಂದು ತೋರುವ ಹಂಬಲ ನಮ್ಮದು.

"ಖಡ್ಗವಾಗಲಿ ಕಾವ್ಯ ಜನರ ನೋವಿಗೆ ಮಿಡಿವ ಪ್ರಾಣ ಮಿತ್ರ" ಎಂಬ ಕವಿ ವಾಣಿಯ ಘೋಷಣೆಯೊಂದಿಗೆ "ಹೊಸ ದಿಕ್ಕು" ವಿನ ಪ್ರಥಮ ಸಂಚಿಕೆಯನ್ನು ಇದೀಗ ನಿಮ್ಮ ಕೈಗಳಲ್ಲಿಡಲು ಸಂತೋಷ ಹೆಮ್ಮೆಯಾಗುತ್ತದೆ.

ಈ ತರುಣರ ಸಾಹಸಕ್ಕೆ ಬೆನ್ನುತಟ್ಟಿ ಬೆಂಬಲಕ್ಕೆ ನಿಂತರೆ ಇದು ನಿರಂತರವಾಗಿ ಮುನ್ನಡೆಯಬಲ್ಲುದು. ಇದು ನನ್ನ ಪತ್ರಿಕೆ ಎಂದು ಅಭಿಮಾನದಿಂದ ಸ್ಪಂದಿಸುವವರಿಗೆಲ್ಲಾ ಇದು ಅವರದೇ ಪತ್ರಿಕೆ ಆಗಲಿದೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಪತ್ರಿಕೆಯೊಂದನ್ನು ಆರಂಭಿಸುವ ಕುರಿತು ಗೆಳೆಯರಾದ ಚಂದ್ರಕಾಂತ ಕರದಳ್ಳಿ, [redacted] ಹಾಗೂ ಸೂಗಯ್ಯ ಹಿರೇಮಠ ಮತ್ತು ನಾನು ಸಾಕಷ್ಟು ಸಲ ಯೋಚಿಸಿ. ಚಿಂತಿಸಿ ಕೊನೆಗೊಮ್ಮೆ ಹೊರತರಲು ನಿರ್ಧರಿಸಿದಾಗ ಪತ್ರಿಕೆಗೆ ಸಂಪಾದಕರಾಗಿ ಮುನ್ನಡೆಸುವ ಹೊಣೆಯನ್ನು ಸಂತೋಷದಿಂದ ಒಪ್ಪಿದವರು ಗೆಳೆಯ ತಿಮ್ಮಯ್ಯ ಪುರ್ಲೆಯವರು. ಒಟ್ಟಿನಲ್ಲಿ ಈಗ ಪತ್ರಿಕೆಯನ್ನು ಆರಂಭಿಸುವ ಕ್ರಿಯೆಯಂತು ಮಾಡಿದ್ದೇವೆ. ಇದನ್ನು ನಿರಂತರವಾಗಿ ಮುನ್ನಡೆಸಿಕೊಂಡು ಹೋಗುವ ಹಂಬಲ ನಮಗಿದೆ. ಅದಕ್ಕೆ ಓದುಗರ, ಲೇಖಕರ, ಸಹೃದಯರ ತನು-ಮನ-ಧನದ ಬೆಂಬಲ ನಮಗೆ ಬೇಕು.

ಗಂಭೀರವಾದ ಸಾಹಿತ್ಯ ಹಾಗು ಸಂಸ್ಕೃತಿಕ ಕ್ಷೇತ್ರಕ್ಕೆ ಮೀಸಲಾದ ಇಂತಹ ಪತ್ರಿಕೆಗೆ ಸಾಮಾನ್ಯ ಓದುಗರು ಸ್ಪಂದಿಸುವದಿಲ್ಲ. ಹಾಗಾಗಿ ಗಂಭೀರ ಓದುಗರನ್ನು, ಸಾಹಿತ್ಯಾಸಕ್ತರನ್ನು ಒಳಗೊಂಡ ಒಂದು ಮಿತಿಯಲ್ಲಿ ಪತ್ರಿಕೆ ನಡೆಸಬೇಕಾಗುತ್ತದೆ. ಹಾಗಾಗಿ ಇಲ್ಲಿ ಬರೆಯಲು ತೊಡಗುವ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದ ಕಾಳಜಿವುಳ್ಳವರೇ ಈ ಪತ್ರಿಕೆಗೆ ಸ್ಪಂದಿಸಬೇಕಾಗಿದೆ.

ರೂ. ಐವತ್ತು ಕಳಿಸಿಕೊಡುವ ಮೂಲಕ ಚಂದಾದಾರರಾಗಿ ಪತ್ರಿಕೆಯನ್ನು ಬೆಳೆಸಬೇಕಾಗಿದೆ. ನೀವು ಕೊಡುವ ಅಮೂಲ್ಯವಾದ ಪ್ರಾಮಾಣಿಕ ಹಣಕ್ಕೆ ತೃಪ್ತಿಯಾಗುವಂತೆ ಪತ್ರಿಕೆ ರೂಪಿಸುವ ಹೊಣೆ ಈ "ಹೊಸ ದಿಕ್ಕು" ಬಳಗ ಹೊರಬಲ್ಲುದು. ಹಾಗಾಗಿ ನಿರಂತರವಾಗಿ ಚಂದಾದಾರರಾಗುವ ಕ್ರಿಯೆ ನಿಮ್ಮಿಂದಲೇ ಆರಂಭವಾಗಬೇಕಿದೆ.

ಸೃಜನಕ್ರಿಯೆ ನಿಂತ ನೀರಲ್ಲ, ಅದು ನಿರಂತರ ಪ್ರವಾಹ. ಆ ಪ್ರಕ್ರಿಯೆಯಲ್ಲಿ ಹೊಸಹೊಸತನ್ನು ಅನುಭವಜನ್ಯವಾಗಿಸಿಕೊಳ್ಳುವ ಕಲಿಯುವ ತಹತಹಿಕೆಯಿಂದ ಹೊರಟಿದ್ದು ಈ "ಹೊಸದಿಕ್ಕು" ಬಳಗ. ನಾವು ಇದೀಗ ಅಂಬೆಗಾಲಿಟ್ಟು ನಡೆಯಲು ಆರಂಭಿಸಿದ್ದೇವೆ. ಸಾಧಿಸಬೇಕಾದುದು ಅಪಾರವಿದೆ, ಹಾಗಾಗಿ ಈ ಕ್ರಿಯೆಯಲ್ಲಿ ತೊಡಗಿರುವ ಹಿರಿಯರ ಸಲಹೆ, ಸಹಕಾರ, ಪ್ರೋತ್ಸಾಹ ನಮಗೆ ಬೇಕು, ಆಸಕ್ತರು,ಯುವಕರು ವಿದ್ಯಾರ್ಥಿಗಳು ಸಹೃದಯರು, ಈ "ಹೊಸ ದಿಕ್ಕುವಿನ" ವಾಹಿನಿಯಲ್ಲಿ ಬೆರೆತುಕೊಳ್ಳಲು ಮುಂದಾಗಬೇಕು, ನಿಮ್ಮೆಲ್ಲರ ಸಹಕಾರ ಅಭಿಮಾನ ಇದರೊಡನೆ ಇದ್ದರೆ ಹೊಸ ದಿಕ್ಕಿ ನೆಡೆಗೆ ತೆವಳಬಲ್ಲುದು. ನೀವೆಲ್ಲಾ ನಿಮ್ಮ ನಿಮ್ಮದೇ ಕಾರಣಗಳಿಗೆ ಕಟ್ಟುಬಿದ್ದು ಕೈ ಬಿಟ್ಟರೆ 'ದೇವರೇ ದಿಕ್ಕು' ಆಗಬಲ್ಲುದು, ಹುಟ್ಟಿಗೆ ಹೆಚ್ಚಿನ ಸಂತೋಷ ಪಡುವದಿಲ್ಲ: ಸಾವಿಗೆ ಬೋರಾಡಿ ಅಳುವದು ಇಲ್ಲ. ನಮ್ಮ ಕ್ರಿಯೆ ಜನಕ್ಕೆ ಹಿಡಿಸಲಿಲ್ಲ, ನಮ್ಮ ಕೆಲಸದಲ್ಲಿ ಪ್ರಾಮಾಣಿಕತೆ ಇದ್ದರು ಸಹ ಜಿನರನ್ನು ಮೆಚ್ಚಿಸಿ. ನಂಬಿಸಿ ಮುಂದುವರಿಯುವ ತಂತ್ರದಲ್ಲಿ ವಿಫಲರಾದೆವು ಅಂದುಕೊಂಡು ಆರಂಭದಲ್ಲಿಯ ಉತ್ಸಾಹದಷ್ಟೆ ನಿಟ್ಟುಸಿರು ಬಿಟ್ಟು ನೇಪಥ್ಯಕ್ಕೆ ಸರಿಯುತ್ತೇವೆ.

ಪತ್ರಿಕೆಯ ಬಗ್ಗೆ ಎಲ್ಲವನ್ನು ಹೇಳಿದ್ದೇವೆ ಎಂಬ ನಂಬಿಕೆ ನಮಗಿದೆ, ಹೆಚ್ಚಿನದನ್ನು ಮುಂದಿನ ಸಂಚಿಕೆಯ ಈ ಅಂಕಣದಲ್ಲಿ ಬರೆಯುತ್ತೇನೆ ಈ ಪತ್ರಿಕೆ ತರಲು ನಾವು ಹೊರಟಿದ್ದನ್ನು ತಿಳಿಸಿದರೆ ನಾಡಿನ ಸಾಹಿತ್ಯ ದಿಗ್ಗಜಗಳನೇಕರು ಓಲೆ ಬರೆದು ತಮ್ಮ ಸಲಹೆ, ಬೆಂಬಲ ತಿಳಿಸಿ ಪ್ರೋತ್ಸಾಹ ನೀಡಿದ್ದಾರೆ. ಈ ನೆಲದಲ್ಲಿ ಪತ್ರಿಕೆ ಆರಂಭಿಸಲು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಅನೇಕ ಜನ ನಮಗೆ ನಿರಂತರವಾಗಿ ಹುರಿದುಂಬಿಸಿದ್ದಾರೆ. ಆ ಎಲ್ಲ ಗಣ್ಯರಿಗೆ ಪತ್ರಿಕೆಯ ಪರವಾಗಿ ವಂದನೆಗಳನ್ನು ತಿಳಿಸುತ್ತೇನೆ.

ಪತ್ರಿಕೆಯ ಪ್ರಥಮ ಸಂಚಿಕೆಗಾಗಿ ಸಾಹಿತ್ಯ ಸ್ಪರ್ಧೆಯನ್ನು ಹಮ್ಮಿಕೊಂಡು ಬರಹಗಳನ್ನು ಆವ್ಹಾನಿಸಲಾಗಿತ್ತು. ಆದರೆ ಪತ್ರಿಕೆಯ 4-5 ಸಂಚಿಕೆಗಳು ಹೊರಬಂದ ನಂತರ ಪತ್ರಿಕೆಯದೇ ಆದ ಧೋರಣೆ ರೂಪಿತಗೊಂಡ ನಂತರ ಸಾಹಿತ್ಯ ಸ್ಪರ್ಧೆ ನಡೆಸುವದು ಒಳಿತು ಎಂದು ಹಲವರು ಅಮೂಲ್ಯವಾದ ಸಲಹೆ ನೀಡಿದಾಗ ಅದು ಸರಿ ಅನಿಸಿತು. ಹಾಗಾಗಿ ಸಾಹಿತ್ಯ ಸ್ಪರ್ಧೆಯನ್ನು ಸಧ್ಯಕ್ಕೆ ಕೈ ಬಿಟ್ಟು ನಮಗೆ ಬಂದ ಬರಹಗಳಲ್ಲಿ ಉತ್ತಮವಾದವುಗಳನ್ನು ಆಯ್ಕೆ ಮಾಡಿ ಇಲ್ಲಿ ಪ್ರಕಟಿಸಿದ್ದೇವೆ ಉಳಿದವುಗಳನ್ನು ಮುಂದಿನ ಸಂಚಿಕೆಗಳಲ್ಲಿ ಬಳಸಿಕೊಳ್ಳಲಾಗುವದು.

ನಮಗೆ ಬಂದ ರಾಶಿ ರಾಶಿ ಬರಹಗಳಲ್ಲಿ ಪ್ರಗತಿಪರ ಧೋರಣೆಗೆ ಹೊಂದುವ ನಿರೀಕ್ಷಿತ ಗುಣಮಟ್ಟದ ಬರೆಹಗಳು ಕಡಿಮೆ ಇವೆ. ಚೆನ್ನಾಗಿ ಬರೆದ ಕೆಲವರು 15 ರಿಂದ

25 ಪುಟಗಳ ವರೆಗಿನ ಕಥೆ, ಲೇಖನ 4–5 ಪುಟದ ಕವನ ಕಳಿಸಿದ್ದಾರೆ, ಪತ್ರಿಕೆಯ ಪರಿಮಿತಿಯಲ್ಲಿ ನಮಗೆ ಹೆಚ್ಚೆಂದರೆ 4–5 ಪುಟದ ಕಥೆ, ವೈಚಾರಿಕ ಲೇಖನ. ಪ್ರಬಂಧಗಳು, ಸಂವಾದ ಬರೆಹಗಳು, ವಿಡಂಬನೆ ಇತ್ಯಾದಿಗಳಿರಲಿ, ಕವನಗಳಂತು ಒಂದೆರಡು ಪುಟಕ್ಕೆ ಮೀರದಂತಿದ್ದರೆ ಚೆನ್ನ. ಹನಿಗವನ ಚುಟುಕುಗಳಲ್ಲಿ ತಮಗೆ ಇಷ್ಟವೆನಿಸಿದ ಪ್ರಭಾವಿ ಅನಿಸಿದ 4-5 ಅನ್ನು ಪ್ರತಿ ಸಲ ಕಳಿಸಿದರೆ ಒಳ್ಳೆದು, ಹೀಗಾಗುವದರಿಂದ ಈ ಭಾಗದ ಎಲ್ಲರಿಗೂ ಪತ್ರಿಕೆಯ ಮೂಲಕ ಅವಕಾಶ ಒದಗಿಸಲು ಸಾಧ್ಯವಾಗುತ್ತದೆ, ಈ ಕಷ್ಟ ಹಾಗು ಉದ್ದೇಶವನ್ನು ಅರ್ಥಮಾಡಿಕೊಂಡು ಸಾಹಿತಿ ಮಿತ್ರರು, ಹಿರಿಯರು ಓದುಗರು, ಯುವ ಬರೆಹಗಾರರು ನಿರಂತರವಾಗಿ ಕಳಿಸುತ್ತಾ ಹೋಗುವ ಮೂಲಕ ಪತ್ರಿಕೆಗೆ ವಸ್ತುವಿನ ಕೊರತೆ ಬಾರದಂತೆ ನೋಡಿಕೊಳ್ಳಬೇಕೆಂದು ವಿನಂತಿಸುತ್ತೇವೆ.

—ಶ್ರೀ ಹೊನ್ನಕಲ್

# ಶರಣರ ಪ್ರಗತಿಪರ ವಿಚಾರಗಳು ಮತ್ತು ನಾವು

ಡಾ. ವ್ಹಿ. ಜಿ. ಪೂಜಾರ

ನಾವಿಂದು ಜೋತಿಷ್ಯ, ಶಕುನ ನಂಬುವವರನ್ನೂ, ತೀರ್ಥಕ್ಷೇತ್ರಯಾತ್ರೆ ಮಾಡಿ ನದಿಯಲ್ಲಿ ಮುಳುಗೆದ್ದು ಪುನೀತರಾದೆವೆನ್ನುವವರನ್ನೂ, ಕಲ್ಲು-ಗಿಡ ದೇವರೆಂದು ನಂಬಿ ಅವನ್ನು ಸುತ್ತು ಹಾಕುವವರನ್ನೂ, ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಜಾತೀಯತೆ ಮಾಡಬಾರದು, ಇದು ನಮ್ಮ ದೇಶಕ್ಕಂಟಿದ ಕಳಂಕ, ಶಾಪ ವೆಂದದನ್ನು ಘಂಟಾಘೋಷವಾಗಿ ಖಂಡಿಸುತ್ತ ಉದ್ದುದ್ದ ಭಾಷಣ ಬಿಗಿದು ಒಳಗೊಳಗೆ ಜಾತೀಯತೆ ಮಾಡುವವರನ್ನೂ, 'ಕಳಬೇಡ, ಕೊಲಬೇಡ ಹುಸಿ ನುಡಿಯಬೇಡ' ಎಂಬ ವಚನವನ್ನು ಪಾಠಮಾಡಿ ನಿಜ ಜೀವನದಲ್ಲಿ ಇವೆಲ್ಲವನ್ನೂ ಮಾಡುತ್ತ ಈ ವಚನವನ್ನು ಮಾತ್ರ ಬೇಕೆಂದಾಗ ಗಿಳಿಯಂತೊಪ್ಪಿಸುವವರನ್ನೂ, ಅಂತರ್ಜಾತೀಯ ವಿವಾಹಗಳನ್ನು ಸಾರ್ವಜನಿಕರೆದುರು ಪ್ರೋತ್ಸಾಹಿಸಿ, ಬೇಕೆಂದರೆ ಕೆಲವು ವಿವಾಹಗಳನ್ನೂ ಮಾಡಿಸಿ ತಾವು ಮಾತ್ರ ತಮ್ಮ ಬದುಕಿನಲ್ಲಿ ಒಪ್ಪಿಕೊಳ್ಳದೇ ಇರುವವರನ್ನೂ ಕಣ್ಣೆಟ್ಟಲ್ಲಿ ಕಾಣು ವೆವು. ಇಂಥವರ ಸಂಖ್ಯೆಯೇ ಇಂದು ಜಾಸ್ತಿಯಾಗತೊಡಗಿದೆ, ಇವರ ಮಾತು-ಕೃತಿ, ಅರಿವು-ಆಚಾರ, ಜ್ಞಾನ-ಕ್ರಿಯೆಗಳಲ್ಲಿ ಕಂದರವಿರುವುದನ್ನು ಕಾಣುವೆವು. ಇಂಥ ಕಂದರ ತುಂಬಿಕೊಳ್ಳಬೇಕಾದರೆ ನಮಗಿರುವ ಒಂದೇ ದಾರಿ ಎಂದರೆ ಹನ್ನೆರಡನೇ ಶತಮಾನದ ಶರಣರ ಪ್ರಗತಿಪರ ವಿಚಾರಗಳನ್ನು ಅರಿಯುವದು. ಮತ್ತು ಅವನ್ನು ಆಚರಣೆಯಲ್ಲಿ ತರುವುದು. ಹೀಗೆ ತಂದಾಗ ಸಮಾಜದಲ್ಲಿನ ಅಸಮಾನತೆ, ಅಜ್ಞಾನ, ಡಂಭಾಚಾರ ತೊಲಗಿ ನಿಜವಾದ ಪ್ರಗತಿಯಾಗುವುದು. ಎಂಟನೂರು ವರ್ಷಗಳಷ್ಟು ಹಿಂದೆಯೇ ಹೇಳಿದ ಶರಣರ ಎಷ್ಟೋ ವಿಚಾರಗಳು ನಮಗಿಂದೂ ಮಹತ್ವದವೆನ್ನಿಸುತ್ತವೆ, ಪ್ರಗತಿ ಪರವೆನ್ನಿಸುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಲಕ್ಷಿಸಬಹುದಾಗಿದೆ.

ದೇವರು-ಧರ್ಮ ಇವೆರಡರ ಬಗೆಗೆ ಶರಣರು ತಳೆದ ನಿಲುವು ಸಾಂಪ್ರದಾಯಿಕ ವಾದುದಲ್ಲ, ದಿಟ್ಟತನದ್ದು, ಪ್ರಗತಿಪರವಾದದ್ದು. ಅವರ ದೃಷ್ಟಿಯಲ್ಲಿ ದೇವರೆಂದರೆ ಗುಡಿ-ಗುಂಡಾರಗಳಲ್ಲಿರುವ ಮೂರ್ತಿಗಳಲ್ಲ, ಅದೊಂದು ಜ್ಞಾನದ ತಿರುಳು, ಸತ್‌ಶಕ್ತಿ.

ಪ್ರತಿಯೊಬ್ಬರ ಹೃದಯದಲ್ಲೂ ಅರಿವಿನ ರೂಪದಲ್ಲಿ ಸುಪ್ತಾವಸ್ಥೆಯಲ್ಲಿ ಇರುವಂಥದು. ಅದನ್ನು ಅರಿಯಬೇಕಾದರೆ ಸಾಧನೆ ಮಾಡಬೇಕೇ ವಿನಾ ಶುಷ್ಕ ಪೂಜೆ ಪುನಸ್ಕಾರಗಳನ್ನಲ್ಲ. ಬಸವಣ್ಣನವರೇ ಒಂದು ಕಡೆ 'ಕಲ್ಲು ದೇವರು-ದೇವರಲ್ಲ. ಮಣ್ಣು ದೇವರು ದೇವರಲ್ಲ, ಪಂಚಲೋಹದಲ್ಲಿ ಮಾಡಿದ್ದು ದೇವರಲ್ಲ, ತನ್ನ ತಾನರಿದು ತಾನಾರೆಂಬುದ ತಿಳಿದಡೆ ತಾನೇ ದೇವ ನೋಡಾ' ಎಂದಿದ್ದಾರೆ. ಪ್ರಭುದೇವರೂ ಒಂದೆಡೆ 'ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು ದೇವರ ಮಾಡಿದೊಡೆ ಆನು ಬೆರಗಾದೆನಯ್ಯ' ಎಂದು ಆಶ್ಚರ್ಯ ವ್ಯಕ್ತಮಾಡಿದ್ದಾರೆ. ಅವರ ದೃಷ್ಟಿಯಲ್ಲಿ ದೇವಾಲಯ ಕಟ್ಟಿಸಿ ಅದರಲ್ಲಿ ಮೂರ್ತಿ ಇಟ್ಟು ಪೂಜಿಸುವುದು ಮತ್ತು ನಾನಾ ವಿಧದ ಇಷ್ಟಾರ್ಥಗಳ ಪೂರೈಕೆಗಾಗಿ ಹರಕೆಗಳನ್ನು ಹೊತ್ತು ಸಲ್ಲಿಸುವುದು ಅರ್ಥವಿಲ್ಲದ ಆಚರಣೆಗಳು, ಅಜ್ಞಾನವನ್ನು ಹುಟ್ಟುಹಾಕಿ ಬೆಳೆಸುವಂಥವು ಆಗಿವೆ. ಇಂಥ ವ್ಯರ್ಥ ಆಚರಣೆಗಳಲ್ಲಿ ತೊಡಗಿದ ಅಜ್ಞಾನಿಗಳನ್ನು ಕಂಡು ಅಂಬಿಗರ ಚೌಡಯ್ಯ 'ಕಲ್ಲದೇವರ ಪೂಜಿಸಿ ಕಲಿಯುಗದಿ ಕತ್ತೆಗಳಾಗಿ ಹುಟ್ಟಿದರು, ಮಣ್ಣ ದೇವರ ಪೂಜಿಸಿ ಮಾನ ಹೀನರಾದರು, ಮರನದೇವರ ಪೂಜಿಸಿ ಮಣ್ಣುಕೂಡಿದರು' ಎಂದು ಮಾರ್ಮಿಕವಾಗಿ ನುಡಿದಿದ್ದಾನೆ, ಅಪಹಾಸ್ಯ ಮಾಡಿದ್ದಾನೆ. ಮನುಷ್ಯ ನಿರ್ಮಿತ ಕಲ್ಲು-ಮಣ್ಣುಗಳನ್ನು ದೇವರೆಂದು ನಂಬಿ ಪೂಜಿಸುವುದು ನಿರರ್ಥಕವಾದುದು. ಇದರಿಂದಾವ ಪುರುಷಾರ್ಥದ ಸಾಧನೆ ಆಗದೆನ್ನುವ ಶರಣರ ವಿಚಾರ ನಿಜಕ್ಕೂ ಇಂದು ಅತ್ಯಂತ ಪ್ರಸ್ತುತವಾದದ್ದಾಗಿದೆ.

ಶರಣರ ದೃಷ್ಟಿಯಲ್ಲಿ ಧರ್ಮವೆಂದರೆ ಬಹುಜನ ತಿಳಿದಂತೆ ಜಾತಿ ಅಲ್ಲ, ಮಾನವನ ಒಳತಿಗಾಗಿ, ಸಮಾಜ ಕಲ್ಯಾಣಕ್ಕಾಗಿ ಇರುವಂಥ ಒಂದು ನಿಯಮ, ಆಚರಣೆ. ಒಳ್ಳೆಯ ಸ್ವಭಾವ, ನಡೆ-ನುಡಿಗಳೇ ಧರ್ಮ. ಧರ್ಮದಲ್ಲಿ ಮೇಲು-ಕೀಳು ಎಂಬುದೇ ಇಲ್ಲ. ಮನುಷ್ಯರೆಲ್ಲ ಒಂದೇ ಧರ್ಮಕ್ಕೆ ಸೇರಿದವರು. ಮೂಲಭೂತವಾಗಿ ಮಾನವನ ಭಾವನೆಯಲ್ಲಿಯೇ ಧರ್ಮದ ಅಂಶವಿದೆಯೆಂದು ನಂಬಿದ ಶರಣರು ಅದು ಇನ್ನೊಬ್ಬರಿಗೆ ದಯೆಯನ್ನು ತೋರಿಸುವಾಗ, ದುಃಖಿಗಳ, ದೀನ-ದುರ್ಬಲರ ಕಣ್ಣೀರನ್ನೊರೆಸಿ, ಅವರಿಗೆ ಧೈರ್ಯ ತುಂಬುವಾಗ, ವಿಪತ್ತಿನಲ್ಲಿ ಸಿಲುಕಿದವರನ್ನು. ಶರಣು ಬಂದವನ್ನು ರಕ್ಷಿಸುವಾಗ ವ್ಯಕ್ತಗೊಳ್ಳುವುದು ಎನ್ನುವರು, ಹೀಗೆ ಧರ್ಮದ ಕಲ್ಪನೆಯನ್ನೇ ಶರಣರು ಹೊಸದಾಗಿಸಿದರು.

ಶಕುನ ಕೇಳುವುದು, ಜ್ಯೋತಿಷ್ಯ ಕೇಳುವುದು, ತಿಥಿ, ವಾರ. ನಕ್ಷತ್ರ ಮತ್ತು ಮುಹೂರ್ತ ನೋಡಿ ಶುಭವೆಂದು ಬಂದಾಗ ಕೆಲಸಕ್ಕೆ ತೊಡಗುವುದು, ರಾಹುಕಾಲ-ಗುಳಿಕಕಾಲ ಎಣಿಸುವುದು-ಇವೆಲ್ಲವನ್ನು ಶರಣರು ಖಡಾ ಖಂಡಿತವಾಗಿ ಮೂಢ ನಂಬಿಗೆಗಳೆಂದಿದ್ದಾರೆ. ಶರಣರು ಇವನ್ನು ನಂಬಲಿಲ್ಲ ಅಷ್ಟೇ ಅಲ್ಲ ಇವು ಮನುಷ್ಯ

ಪ್ರಯತ್ನದೆದುರು ಇಂಥವೆಲ್ಲ ಗೌಣ, ನಾವು ಕೆಲಸ ಕೈಕೊಂಡ ಗಳಿಗೆಯೇ ಶ್ರೇಷ್ಠವೆಂದು ನಂಬಬೇಕೆಂದಿದ್ದಾರೆ. ಮುಹೂರ್ತ ಕೇಳಿ ಕೆಲಸ ಮಾಡುವದು ಅರ್ಥವಿಲ್ಲದ್ದೆಂದು ಶರಣರು ಅಂದೇ ಖಡಾಖಂಡಿತವಾಗಿ ಸಾರಿದ್ದರೂ ನಾವಿಂದು ಇದನ್ನು ಆಚರಣೆಯಲ್ಲಿ ತಂದಿಲ್ಲ. ಇಂದೂ ನಾವು ಶುಭ ಕೆಲಸಕ್ಕೆ ತೊಡಗುವ ಮುನ್ನ ಮುಹೂರ್ತ ನೋಡಿಯೇ ತೊಡಗುತ್ತೇವೆ, ಇದೆಂಥ ಪರಿಹಾಸ್ಯ, ಶರಣರ ಇಂಥ ಪ್ರಗತಿಪರ ವಿಚಾರಗಳನ್ನು ನಮ್ಮ ದೈನಂದಿನ ಬದುಕಿನಲ್ಲಿ ಅಳವಡಿಸಿಕೊಳ್ಳಲಿಕ್ಕೆ ಆಗಿಲ್ಲವೆಂಬುದರ ಬಗ್ಗೆಯೇ ಸಂಶಯ ಬರುತ್ತದೆ.

ವೇದ, ಪುರಾಣ ಆಗಮ ಮತ್ತು ಸ್ಮೃತಿಗಳಲ್ಲಿನ ವಿಷಯಗಳೆಲ್ಲವೂ ಸ್ವೀಕಾರಕ್ಕೆ ಅರ್ಹವಲ್ಲವೆಂದು ಶೋಧಿಸಿದರು. ಒಳ್ಳೆಯದನ್ನು ಸ್ವೀಕರಿಸಿ, ಅರ್ಥರಹಿತವಾದುದನ್ನು ಅಜ್ಞಾನವನ್ನು ಹುಟ್ಟುಹಾಕುವಂಥವನ್ನು ಶರಣರು ಪ್ರಶ್ನಿಸಿದರು. ಮತ್ತು ಇವುಗಳ ಮೇಲೆ ಹೊಟ್ಟೆ ಹೊರೆದುಕೊಳ್ಳುವ ಜನರನ್ನು ತರಾಟೆಗೆ ತೆಗೆದುಕೊಂಡರು. ಮಾನವ ನಲ್ಲಿ ಇರುವ ಅರಿವನ್ನು ಜಾಗೃತಗೊಳಿಸಿಕೊಳ್ಳುವ ಅನುಭವವೇ ವೇದ ಪುರಾಣಗಳಿಗಿಂತ ದೊಡ್ಡದು, ಮಡಿವಾಳ ಮಾಚಿದೇವ ತನ್ನೊಂದು ವಚನದಲ್ಲಿ 'ವೇದ ವಿಪ್ರರ ಬೋಧೆ ಶಾಸ್ತ್ರ, ಸಂತೆಯ ಮಾತು, ಪುರಾಣ ಪುಂಡರಗೋಷ್ಠಿ ಆಗಮ ಅನೃತದ ನುಡಿ, ತರ್ಕ ವ್ಯಾಕರಣ ಕವಿತ್ವ ಪ್ರೌಢಿಮೆ, ಇದು ಕಾರಣ ತನ್ನೊಳಗರಿದ ಅನುಭವದಿಂದ ಘನ ವಿಲ್ಲೆಂದ ಕಲಿದೇವರ ದೇವ' ಎಂದು ನುಡಿದಿದ್ದಾನೆ. ಇದರರ್ಥ ಶರಣರು ವೇದ ಆಗಮಗಳ ವಿರೋಧಿಗಳೆಂದೇನೂ ಅಲ್ಲ, ಅಂದು ವೇದಾಗಮಗಳಿಗೆ ಸಲ್ಲುತ್ತಿದ್ದ ಅತಿಯಾದ ಗೌರವವನ್ನು ಕಂಡು ಮತ್ತು ಅವು ಜನರನ್ನು ಸಂಪ್ರದಾಯ ಶರಣರನ್ನಾಗಿ ಸುತ್ತಿದ್ದುದನ್ನೂ, ಶೋಷಣೆಗೆ ದಾರಿ ಮಾಡಿಕೊಡುತ್ತಿದ್ದುದನ್ನೂ ಅರಿತು ಹೀಗೆ ಹೀಗಳೆದಂತಿದೆ. ಇದೊಂದು ವಿಧದ ಸಾತ್ವಿಕ ಕೋಪ. ಸಮಾಜ ಸುಧಾರಣೆಗೆ ಇಂಥ ಕೋಪ ಅತ್ಯವಶ್ಯ ಬೇಕು.

ಯಾವುದೇ ಆಚರಣೆ ಇರಲಿ, ನಂಬಿಕೆ ಇರಲಿ ಅದನ್ನು ವೈಚಾರಿಕ ಒರೆಗಲ್ಲಿಗೆ ಉಜ್ಜಿ ಆಚರಿಸಬೇಕು, ನಂಬಬೇಕು ಎಂಬುದು ಶರಣರ ವಿಚಾರ. ನೀರ ಕಂಡಲ್ಲಿ ಮುಳುಗಿ ಪವಿತ್ರರಾದೆವು, ಮರ ಕಂಡಲ್ಲಿ ಸುತ್ತಿ ಪುನೀತರಾದೆವು ಎಂದು ತೃಪ್ತಿಪಡುವ ಜನ ಹಿಂದೂ ಇದ್ದರು. ಇಂದೂ ಇದ್ದಾರೆ. ಇಂಥವರ ಆಚರಣೆಗೆ ಯಾವ ಬೆಲೆಯೂ ಇಲ್ಲ. ಇವು ಜನರನ್ನು ಮೂಢರಾಗಿಸುವುವು, ವಿಚಾರಶೀಲರನ್ನಾಗಿಸವು, ಎಂದು ಶರಣರು ನಿರ್ದಾಕ್ಷಿಣ್ಯವಾಗಿ ನುಡಿದಿದ್ದು ಅವರ ಪ್ರಗತಿಪರ ವಿಚಾರಕ್ಕೆ ಸಾಕ್ಷಿಯಾಗಿದೆ.

ಶರಣರು ಅಷ್ಟು ಹಿಂದೆಯೇ ಅಂತರ್ಜಾತೀಯ ವಿವಾಹವನ್ನು ನೆರವೇರಿಸ ಹೊರಟಿದ್ದು ಸಾಮಾನ್ಯವಾದುದೇನಲ್ಲ. ಅತ್ಯಂತ ಕಟ್ಟುನಿಟ್ಟಾಗಿ ಜಾತಿ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದವರ ಮಧ್ಯ ಅವರು ಬ್ರಾಹ್ಮಣ ವಧು, ಹರಿಜನ ವರ

ಇವರ ವಿವಾಹವನ್ನು ನಡೆಸಿದರು. ಇದರ ಪರಿಣಾಮ ಏನೇ ಆಗಿರಲಿ. ಈ ಘಟನೆ ಅವರ ಪ್ರಗತಿಪರ ಧೋರಣೆಗೆ ಜೀವಂತ ಸಾಕ್ಷಿ, ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂಥದು.

ಸ್ತ್ರೀ ಪುರುಷನ ಸಮಾನಳಲ್ಲವೆಂದು, ಧಾರ್ಮಿಕ-ವಿಧಿ-ವಿಧಾನ ನೆರವೇರಿಸಲು ಅನರ್ಹಳೆಂದು ಅವಳನ್ನು ಕೆಲ ಸ್ವಾರ್ಥಿಗಳು ದೂರ ಇಟ್ಟಿದ್ದರು. ಇದಕ್ಕೆ ಮನುವಿನ "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂಬ ಮಾತೂ ಕಾರಣವಾಗಿದ್ದಿತು. ಸ್ವಾತಂತ್ರ್ಯ ಕೊಟ್ಟರೆ ಅವಳು ದುರುಪಯೋಗ ಪಡಿಸಿಕೊಳ್ಳುವಳೆಂದು ಕೆಲ ಸ್ವಾರ್ಥಿಗಳ ಎಣಿಕೆ. ಅವಳು ಹೆರುವ ಯಂತ್ರ, ಭೋಗ ವಸ್ತು, ಪುರುಷನಿಗಾಗಿಯೇ ಹುಟ್ಟಿದವಳು ಎಂಬ ಭಾವನೆ ಹೆಚ್ಚು ಕಡಿಮೆ ಅಂದು ಪ್ರಚಲಿತವಿತ್ತು. ಇದನ್ನು ಬೇರು ಸಹಿತ ಕಿತ್ತಿ ಹಾಕಿ ಅವಳೂ ಪುರುಷನ ಸಮಾನಳು ಎಂದು ಶರಣರು ಸಾರಿದರು. ಪುರುಷನಿಗೆ ಸಿಗುವ ಎಲ್ಲ ಸೌಲತ್ತುಗಳನ್ನೂ ಸ್ತ್ರೀಗೂ ದೊರಕಿಸಿಕೊಡಲು ಯತ್ನಿಸಿದರು. ಸ್ತ್ರೀಯನ್ನು ದೇವತೆ ಎಂದು ಗೌರವಿಸುವುದೂ ಯೋಗ್ಯವಲ್ಲ, ಪುರುಷನ ಗುಲಾಮಳೆಂದು ತಿಳಿಯುವುದೂ ಸರಿಯಲ್ಲ, ಅವಳೂ ಪುರುಷನ ಸಮಾನಳೆಂದು ತಿಳಿದರೆ ಸಾಕೆಂದು ಶರಣರು ಸಾರಿದರು. ಇಂಥ ಅವರ ವಿಚಾರ ನಮಗಿಂದು ಅದೆಷ್ಟು ಪ್ರಗತಿಪರವಾಗಿದೆಯಲ್ಲವೇ ?

ಸ್ವರ್ಗ-ನರಕ, ಪಾಪ-ಪುಣ್ಯ, ವಿಧಿ-ದೈವ ಇವೆಲ್ಲ ಮಾನವನಿಂದಲೇ ಕಲ್ಪಿತವಾದಂಥವು, ಜನತೆ ಇವನ್ನು ನಂಬಿ ಕೈಕಟ್ಟಿ ಕೂಡ್ರುವುದು ಸರಿಯಲ್ಲ, ಪುರುಷ ಪ್ರಯತ್ನಕ್ಕೆ ಬೆಲೆ ಕೊಡಬೇಕೆಂದಿದ್ದಾರೆ. ಶರಣರು ಅವರ ಅಭಿಪ್ರಾಯದಲ್ಲಿ ಸ್ವರ್ಗ-ನರಕಗಳನ್ನು ಪಡೆಯಲು ಎಲ್ಲೂ ಹೋಗಬೇಕಿಲ್ಲ. ಅವು ನಾವು ಇರುವಲ್ಲೇ ಇವೆ. ಸತ್ಯದಿಂದ ನಡೆದವರಿಗೆ ಸ್ವರ್ಗ ಇಲ್ಲಿಯೇ ಪ್ರಾಪ್ತವಾಗುತ್ತದೆ. ಸ್ವರ್ಗ-ನರಕಗಳೆಂಬುವು ಸಾಮಾನ್ಯ ಜನ ಭಾವಿಸಿದಂತೆ ಯಾವುವೋ ನಮಗೆ ಅಪರಿಚಿತ ಲೋಕಗಳೇನಲ್ಲ. ಒಳ್ಳೆಯದು-ಕೆಟ್ಟುದು ಇವೆಂಡರ ಅಂತರವನ್ನು ಜನ ತಿಳಿಯಲೆಂದು ಇವು ಹುಟ್ಟಿಕೊಂಡಂಥವು ಎಂಬುದು ಶರಣರ ನಂಬುಗೆ. ಸತ್ತ ಮೇಲೆ ಸ್ವರ್ಗದಲ್ಲಿ ಸುಖ ಸಿಗುತ್ತದೆಂದು ಅವರ ಕಲ್ಪನೆಯಲ್ಲೇ ಮುಳುಗಿ ಸದ್ಯದ ಬದುಕನ್ನು ದುರಂತವಾಗಿಸಿಕೊಳ್ಳಬಾರದು. ಈ ಬದುಕನ್ನು ಹೃದಯಾರೆ ಪ್ರೀತಿಸಬೇಕು, ಮನವಾರೆ ಅನುಭವಿಸಬೇಕು. ಈ ಜೀವನ ಕೊಡುವ ಸಿಹಿಗುಟುಕಿಗೆ ಬಾಯ್ದೆರೆಯಬೇಕು, ಅಂದರೆ ಆಶಾವಾದಿಯಾಗಬೇಕು, ಎಂದಿದ್ದಾರೆ ಶರಣರು. ಅವರ ದೃಷ್ಟಿಯಲ್ಲಿ ಪುನರ್ಜನ್ಮವೆಂಬುದೂ ಜನತೆಗೆ ತಪ್ಪು ದಾರಿಗೆಳೆಯುವಂಥದು, ಜನರನ್ನು ಕರ್ತವ್ಯದಿಂದ ವಿಮುಖಗೊಳಿಸಿ ಆಲಸಿಗಳನ್ನಾಗಿಸುವಂಥದು. 'ನುಡದಂತೆ ನಡೆದರ ಇದೇ ಜನ್ಮ ಕಡೆ' ಎಂಬುದನ್ನು ಗಟ್ಟಿಯಾಗಿ ನಂಬಿ ಅದರಂತೆ ನಡೆದುಕೊಂಡು ಬಂದ ಶರಣರು ಬದುಕನ್ನು ಬಹುವಾಗಿ ಪ್ರೀತಿಸಿದರು, ಜನತೆಯೂ ಇದರಂತೆ ನಂಬಿ ಜೀವಿಸಬೇಕೆಂಬ ಆಶಯ ಅವರದಾಗಿದೆ. ಅವರ ಈ ವಿಚಾರಗಳು ನಮಗಿಂದೂ ಪ್ರಸ್ತುತವೆನ್ನಿಸುತ್ತವೆಯಲ್ಲವೇ ?

○

# ಕಾವೇರಿ

ಕಾವೇರಿ ವ್ಯಭಿಚಾರಿ
ಎನ್ನುವದು ಸಾಕ್ಷಿ ರುಜುವಾತುಗಳಿಂದ
ಸಿದ್ಧವಾಗಿದೆ.
ಆದಕ್ಕಾಗಿ ಆಕೆ ಮುಂದೆಯೂ
ವ್ಯಭಿಚಾರಿಯಾಗಿಯೇ ಬಾಳಬೇಕು,
ಇದು ಮಧ್ಯಂತರ ನ್ಯಾಯಮಂಡಳಿ ತೀರ್ಪು
ಗೆಜ್ಜೆ ಕಟ್ಟಿ ಕುಣಿಯಲು ಹೇಳಿತು
ಕೇಂದ್ರ ಗೆಜೆಟ್
ಹೆತ್ತವರು ಅತ್ತರು,
ಕಾವೇರಿ ಆಶ್ರಯ ಕಳಕೊಂಡವರು ಸತ್ತರು
ಸುದ್ದಿಯಾದಳು ಕಾವೇರಿ
ರಸಿಕರೆಲ್ಲ ಕಾವೇರಿ ಕೇಳಿದರು
ಯಾರೀಕೆ। ಯಾರೀಕೆ!?
ಎಳೆದಾಡಿ ನಲಿದರು, ನಮ್ಮಾಕೆ...ನಮ್ಮಾಕೆ
ದ್ರೌಪತಿಯು ವಸ್ತ್ರಾಪಹರಣದಲಿ
ಷಂಢರಾಗಿ ಕುಳಿತ ಪಾಂಡುನಂದನರ ಪಾಡು
ಕರ್ನಾಟಕ ಶಾಸಕ ಸಂಸತ್ ಸದಸ್ಯರದು
ಈಗ ಕಾವೇರಿ ಬೀದಿಗೆ ಬಿದ್ದು
ಅಂಗಲಾಚುತ್ತಿದ್ದಾಳೆ.
"ಮಾನ ಕಾಪಾಡಿ... ಮಾನ ಕಾಪಾಡಿ..." ಎಂದು
ಹುಟ್ಟಿದ ನಾಡೇ ಕೈಬಿಟ್ಟರೆ ಕಾಯುವವರಾರು ?
ಮಾನ ಮುಚ್ಚಲು ಸೀರೆ ಕೊಡಬೇಕಾದ "ಕೈ"
ಮಾನ ಕಳೆದಾಗ ಗತಿಯೇನು ?
ತಮಿಳರಿಗೆ
ಜಯ ಲಲಿತವಾಗಿದೆ
ಕನ್ನಡಿಗರಿಗೆ ಬಂ... ಶಂಖ ಊದಿದೆ,
ಇಲ್ಲಿ ನೆಲ ಜಲಕ್ಕೆ ಹೋರಾಟ ನಿರಂತರವಾಗಿದೆ.
ಹೋರಾಟದ ನೆಪದಲ್ಲಿ ಹಾರಾಟವೂ ಸೇರಿ
ಕಾವೇರಿ ಅನಾಥವಾಗಿದ್ದಾಳೆ.

# ಅಂತರ ಬಹಳಾಯ್ತು

ಅಂದಿನ ದಿನದಾ ಮಾತೇ ಬೇರೆ
ಇಂದಿಗೆ ಅದನು ನೆನೆಯುವದ್ಯಾಕ
ಅಂತರ ಬಹಳಾಯ್ತು
ಇಂದಿನ ಉಸಿರೇ ಬೇರಾಯ್ತು

ಎಲ್ಲರು ಕೂಡಿ ಬದುಕುವ ಬಾಳು
ನಗುವು ನಲಿವು ಎಲ್ಲದರಲ್ಲಿ
ಎಲ್ಲವು ಸಮಪಾಲು
ಇಂದಿಗೆ ಎಲ್ಲಿದೆ ಈ ಪಾಲು

ಹಾಲು-ಬೆಣ್ಣೆ ಮೊಸರಿನ ಜೊತೆಗೆ
ತುಪ್ಪದ ಸಡಗರ ಸವಿಯೂಟವಿಲ್ಲ
ತೇಗುವ ಕಾಲವದು
ತಳಮಳಗೊಳ್ಳುವ ಕಾಲವಿದು

ಉಡುಗೊರೆ ಇದ್ದರೆ ಉಣ್ಣುವದಿಲ್ಲ
ಉಣ್ಣುವದಿದ್ದರೆ ಮನೆಮಠವಿಲ್ಲ
ಏನದಿರೀ ಸೊಗಸು
ನಮ್ಮೀ ಜೀವನದಿ ಸೊಗಸು

ಬಹಳಷ್ಟೋದಿ ಶಾಣ್ಯಾರಾಗಿ
ಆಗಸದಾಚೆ ಗ್ರಹಗಳಿಗ್ಹೋಗಿ
ಗೌರವಗಳಿಸಿದರು.
ನಮ್ಮೀ ಬಡತನ ಬೆಳೆಸಿದರು.

ಒಬ್ಬರಿಗೊಬ್ಬರಂಟಿಕೊಂಡು
ಇರುವ ಪ್ರೀತಿ ಪ್ರೇಮಕ್ಕಂದು
ಪ್ರಳಯವ ಹಾಡಿದರು
ಪ್ರಯಾಣಕ್ಕೆ ತಾನೇ ಅಲುಪಿದರು.

# ಕೇಶಿರಾಜನ ವರ್ಗ ದೃಷ್ಟಿಕೋನ

ಎಸ್. ಎಸ್. ಹಿರೇಮಠ

ಕೇಶಿರಾಜ ಕನ್ನಡ ಭಾಷೆಗೆ ಮಾಡಿರುವ ಉಪಕಾರ ಸಣ್ಣದಲ್ಲ. ಜೈನ ಪರಂಪರೆಯ ಈ ಕವಿ, ಶಾಸ್ತ್ರಕಾರನಾಗಿ, ಕನ್ನಡ ಭಾಷಾ ವ್ಯಾಕರಣವನ್ನು ವಿಪರವಾಗಿ ಬರೆದು ನಾಡಿಗೆ ನೀಡಿದ ಈ ಮಹೋಪಕಾರ. ಈ ವ್ಯಾಕರಣವನ್ನು ಬರಿ ಜೈನರಷ್ಟೇ ಅಲ್ಲ ಇತರ ಮೇಲ್‌ಜಾತಿ ಜನರೂ ಗೌರವಿಸಿ, ಓದಿ, ಓದಿಸಿ ಪ್ರಯೋಜನ ಪಡೆಯುತ್ತಿದ್ದರೆನ್ನಲು ಸಾಕಷ್ಟು ಉದಾಹರಣೆಗಳು ಸಿಕ್ಕುತ್ತವೆ. "ಶ್ರೀ ಹಾಲೇಶಮಹಿಮಾಮೃತ" ಎಂಬ 1929ರಲ್ಲಿ ಪ್ರಕಟವಾದ ಒಂದು ಗ್ರಂಥದಲ್ಲಿ"ಶಬ್ದಮಣಿಮಠ"ದ ಗುರುಸಿದ್ದಯ್ಯನವರು ಎಂಬ ಹೆಸರು (ಪು. 70) ಬರುತ್ತದೆ, ಈ ಜಂಗಮ ಮನೆತನವು ಜೈನ ಕೇಶಿರಾಜನ ಕೃತಿಯ ಹೆಸರನ್ನೆ ತನ್ನ 'ಅಡ್ಡ ಹೆಸರನ್ನಾಗಿ' ಮಾಡಿಕೊಂಡಿರಲು ಕಾರಣವೇನಿರಬೇಕು ? ಈ ಮನೆತನದವರು ದರ್ಪಣವನ್ನು ಪಾಠಮಾಡುತ್ತ ಬಂದ ಪರಂಪರೆಯವರಾಗಿರಲೇಬೇಕು.

ಹಳೆಯ ಕನ್ನಡ ಭಾಷೆಗೆ ವ್ಯಾಕರಣ ಬರೆಯುವ ಕೆಲಸವನ್ನು 13ನೇ ಶತಮಾನದಲ್ಲಿ ಅಂದರೆ ನಡುಗನ್ನಡದ ಕಾಲದಲ್ಲಿದ್ದ ಕೇಶಿರಾಜ ಕೈಗೆತ್ತಿಕೊಂಡಿದ್ದಾನೆ. ಸಹಜವಾಗಿ ಅನೇಕ ಸಮಸ್ಯೆಗಳು ಅವನಿಗೆ ಎದುರಾಗಿವೆ. ಅವನ ವರ್ಗ ಸ್ವಭಾವಕ್ಕೆ ಸಂಬಂಧಿಸಿ ಕೆಲವು ವಿಷಯಗಳನ್ನು ಇಲ್ಲಿ ಚರ್ಚಿಸುವದು ಉದ್ದೇಶ.

ಸಂಸ್ಕೃತ ದೇವಭಾಷೆ ಎಂಬ ಮೂಢನಂಬಿಕೆಯನ್ನು ಆರ್ಯ ವೈದಿಕ ಪರಂಪರೆ ಜನರಲ್ಲಿ ಬಿತ್ತಿತ್ತು. ಶೋಷಕ ಜನ ವರ್ಗವಷ್ಟೆ ಸಂಸ್ಕೃತವನ್ನು ಪವಿತ್ರವಾಗಿ ಪರಿಶುದ್ಧವಾಗಿ ಮಾತಾಡುತ್ತ ಬಂದಾಗ ಅದು ಸಹಜವಾಗಿ ಸತ್ತೆ ಹೋಯಿತು. ಏಕೆಂದರೆ ಶೋಷಿತ ಅಪಾರ ಜನಕೋಟಿಯಷ್ಟೆ ಯಾವುದೇ ಭಾಷೆಯ ಉಳಿವಿಗೆ ಮೂಲಕಾರಣ ಶಕ್ತಿ. ಸಂಸ್ಕೃತವಲ್ಲಿ ನಡೆದಿರುವಷ್ಟು ಸಾಧನೆಗಳು ಹಿಂದೆ ಬೇರಾವ ಪ್ರಾದೇಶಿಕ ಭಾಷೆಗಳಲ್ಲೂ ನಡೆಯದಿದ್ದುದರಿಂದ ಜ್ಞಾನಗಳಿಕೆಗೆ ಸಂಸ್ಕೃತಕ್ಕೆ ಶರಣು ಹೋಗಬೇಕಾದ

ಯನ್ನು ತಪ್ಪು ಎಂದ (ಶೋಷಕರ ದೋಷಪೂರ್ಣ ಬಿರುದುಗಳನ್ನು ಸರಿ ಎಂದ) ಕೇಶಿ ರಾಜನ ಆಜ್ಞೆಯನ್ನು ಮೀರಿ ಈಗ ಎಲ್ಲರೂ ತಪ್ಪುಗಳನ್ನೆ ಸರಿಯಾಗಿ ಬಳಸುತ್ತಿದ್ದೇವೆ. ಕೇಶಿರಾಜನಿಗೆ ಅರಿಸಮಾಸದ ಸಂದರ್ಭದಲ್ಲಿದ್ದ ಉದಾರತೆ ಈ ಸಂದರ್ಭದಲ್ಲಿ ಏಕೆ ಬರಲಿಲ್ಲ ಎಂಬುದೇ ನನ್ನ ಪ್ರಶ್ನೆ. ಏಕೆಂದರೆ ಬೆರಳ್. ಒರಲ್ ಇತ್ಯಾದಿ ಗ್ರಾಮ್ಯರು ಅರಿಯದೇ ಉಚ್ಚರಿಸುವಂಥ ಪದಗಳು ! ಇದು ವರ್ಗಪರ ನಿಲುವಲ್ಲವೇ ? ಕೇಶಿ ಹೇಳುವ ರಳ ಕುಳ ಕ್ಷಳ, ಶಕಟ ರೇಫಗಳ ತಪ್ಪು ಒಪ್ಪನ್ನು ಕಾಲ ಸ್ವೀಕರಿಸಲೇ ಇಲ್ಲ.

ಅರಿಸಮಾಸ ಸಂದರ್ಭಕ್ಕೆ ತಕ್ಕಂತೆ, ವರ್ಗಕ್ಕೆತಕ್ಕಂತೆ, ನಿರ್ದೇಶವೂ ಆಯಿತು, ದೋಷವೂ ಆಯಿತು, ಗಮಕ ಸಮಾಸದಲ್ಲಿ ಅದಕ್ಕೆ ನಿರ್ದೋಷದ ಪಟ್ಟ ಪ್ರಾಪ್ತ ವಾಯಿತು. ಕೇಶಿಯ ವರ್ಗ ಧೋರಣೆಯ ಇನ್ನೊಂದು ಚಿಕ್ಕ ನಿದರ್ಶನ ಈ ಲಕ್ಷ್ಯ ಪದ್ಯ ಒಕ್ಕಲತಿಯ ಬಗ್ಗೆ ಇದೆ (219 ನೇ ಸೂತ್ರಕ್ಕೆ) "ಒಕ್ಕಲಿತಿ ಜೋಡೆಯಾದಂ । ತಕ್ಕಮುವಳ್ ಸಿತಗೆ. ಪತಿಗೆ ಮಿಗೆ ಕಾಯ್ವಳ್ ನೋ ಟಕ್ಕೆ ಕಡುಸೊಂದಿ ನಾಣಿಲಿ । ಒಕ್ಕಬಯಲೊಳಮುದಾರುಮಂ ಬಂಚಿಸುವಳ್ ॥

ಇಷ್ಟಾದರೂ ಕೇಶಿರಾಜ ಕವಿಯಾಗಿದ್ದರಿಂದ ಪಕ್ಕಾಜನವಿರೋಧಿಯೂ ಆಗಲಾರ ಶೋಷಕ ವರ್ಗವನ್ನು ಟೀಕಿಸುವ, ಅಪಹಾಸ್ಯ ಮಾಡುವ ಕೆಲವು ಪದ್ಯಗಳನ್ನು ಉದ ಹರಿಸುವಲ್ಲಿ ಅವನ ಉದಾರಧೋರಣೆ ಪ್ರಕಟವಾಗಿದೆ. ಈ ವೈರುದ್ಯವನ್ನೇ ನಾವು ಬಹಳ ಮುಖ್ಯವೆಂದು ಗಮನಿಸಬೇಕಾಗುತ್ತದೆ. 112 ನೇ ಸೂತ್ರಕ್ಕೆ ಕೊಡುವ ಉದಾಹರಣೆ— "ಬಡವಾದಿರರಸ, ಕಾಲೋಳ್ ನಡೆದಪಿರಿ. ಒಡನಾರು ಮಿಲ್ಲ. ಕಡಲೆಗಳೇಂ ನಿಮ್ಮಡಿಯೊಳಗೆ, ಪಡುವ ದೇಗುಲದ ಎಡೆಯಾವುದು, ಕುಡದ ನಿಮಗಾ ಈ ಎಡಲಾಯ್ತು ?" ಆದರೆ ಇಲ್ಲಿ ಬಡವನಾದ (ದಾನ ಕೊಡದ್ದರಿಂದ) ಅರಸನನ್ನು ಮಾತ್ರ ವಿಡಂಬಿಸಲಾಗುತ್ತಿರುವದನ್ನು ಗಮನಿಸಿ, ನಾಮಲಿಂಗಕ್ಕೆ ಉದಾಹರಣೆ ಕೊಡುವಾಗ (ಸೂತ್ರ 82) "ಅರಸಂ ಮೂರ್ಖಂ, ಸಚಿವರ್ ಸರಸ್ವತಿ ದ್ರೋಹರ್" ಎಂಬ ಮಾತು ಬರುತ್ತವೆ. "ಪೊನ್ನುಳ್ಳವನೆ ಕುಲೀನಂ, ಚನ್ನಂ, ಕಲಿ, ಸತ್ಯವಾದಿ" (79 ಸೂತ್ರ) ಎಂಬಲ್ಲಿನ ವ್ಯಂಗ್ಯವೂ ಗಮನಾರ್ಹ.

ಆದರೆ ರಾಜಪರ, ಶೋಷಕ ವರ್ಗಪರ ಇರುವ ಉದಾಹರಣೆಗಳ ಜತೆ ಹೋಲಿಸಿ ದರೆ ಈ ಒಂದೆರಡು ವಾಕ್ಯಗಳು ಗೌಣವಾಗಿ ಬಿಡುತ್ತವೆ. ○

ಪಾ. ವೀ. ಅರಕೇರಿ.

# ಸ ಗ ರಾ ದ್ರಿ

ಸಗರಾದ್ರಿ ಕಾಣುತಿದೆ
ಬುದ್ಧ ಮಲಗಿದ ಹಾಗೆ
ಅರಿವಿನ ಹೂವರಳಿ ನಿಂತಿದೆ
ತೆರೆದ ತಾವರೆಗೊಳದೊಳಗೆ !!
ಹಿಂದೊಂದು ದಿನವೀ ನೆಲದಿ
ಬುದ್ಧ ಪೂರ್ಣಿಮೆ,
ಆದೀ ನೆಲದ ಗರಿಮೆ!
ಸುತ್ತಲೂ ಜಾತ್ಯಾಂಧತೆಯ ರೋಗಿಗಳನು,
ಅರಿವಿನ ಕಣ್ಣು ಕಳಕೊಂಡ ವಿಕಲಾಂಗಿಗಳನು
ಶಿವನುಡಿಗಳ ಕಡೆಗಣಿಸಿದ ಶವಗಳನು,
ಕಾಣುತ್ತ ಮರಮರನೆ ಮರುಗುತಿದೆ
ನಟ್ಟ ನಡುರಾತ್ರಿಯ ತಣ್ಣನೆಯ ಬೆಳದಿಂಗಳು
ನಡು ಹಗಲಿನ ಸುಡು ಬಿಸಿಲಾಗಿ
ಕಾಡಿತ್ತೀ ನೆಲದ ಬುದ್ಧನಿಗೆ
ಇಂಥ ಬದುಕಿನ ಬಿಡುಗಡೆಗೆ ಚಡಪಡಿಸುತ್ತ
ಅದೇ ನಡುರಾತ್ರಿಯಲೀ ಬುದ್ಧನೆದ್ದು
ಅರಿವಿನ ಮೇರುಗಿರಿಯನೇರಿ
ಮನುಕುಲಕೆ ಬೆಳಕಾಗಲೆಂದು
ಯೋಗ ನಿದ್ರೆಯಲುಳಿದನಂದು
ಅದಕೊಂದು ಪ್ರತೀಕವೆಂದು–
ಸಗರಾದ್ರಿ ಕಾಣುತಿದೆ
ಬುದ್ಧ ಮಲಗಿದ ಹಾಗೆ
ಅರಿವಿನ ಹೂ ವರಳಿ ನಿಂತಿದೆ
ತೆರೆದ ತಾವರೆಗೊಳದೊಳಗೆ !!

# ಬಾಲ್ಯದ ಚೆಲುವು

ಕೆರೆಯ ಮೇಲಿಂದ ಹಾರ್‍ಯ್ಯರಿ ಇಳಿವಾಗ
ಕುರಿ ಹಿಂಡು ಮಧ್ಯದಲಿ
ಜಿಗಿದಾಡಿ ಬರುವಾಗ ಎಂತಹ ಸೊಬಗಿತ್ತು.

ಹುಳಿ ಮಾವು ಹುಣಸೆ ಉಪ್ಪು
ನೆಚ್ಚಿಕೊಂಡು ಕಚ್ಚಿ ತಿನ್ನುವಾಗ
ತಿಳಿನೀರು ಕೊಳದಲಿ ಈಜಾಡಿ ನಲಿವಾಗ
ಎಂತಹ ಮೋಜಿತ್ತು

ಹೆಣ್ಣು ಗಂಡು ಭೇದ ಇಲ್ಲದೆ
ಸಂಗಡಿಗರಾಗಿ ಶಾಲೆಯಲಿ ಕುಳಿತಾಗ
ಆಟ, ಓಟಗಳಲಿ ಮಣ್ಣು ಮೆತ್ತಿದ
ಮೈ ಕೈ ಧೂಳು ಕೊಡವಿಕೊಂಡು ಮನೆ ಸೇರುವಾಗ
ಎಂತಹ ಹುರುಪಿತ್ತು

ಹಬ್ಬದ ಸಡಗರವು
ಎಲ್ಲೆಲ್ಲೂ ನಡೆವಾಗ
ಕದ್ದೊಯ್ದು ಹಿತ್ತಲಲಿ ಸಿಹಿ ತಿಂಡಿ ತಿನ್ನುವಾಗ
ಎಂತಹ ರುಚಿ ಇತ್ತು

ಜಾತ್ರೆಯ ತೇರಿಗೆ
ಉತ್ತುತ್ತಿ ಒಗೆದು ಬರುವಾಗ
ಸವಾರಿ ಬಂಡಿಯಲಿ ಅಗ್ಗದ ಜಿಲೇಬಿ
ತಿನ್ನುವ ಚಿಣ್ಣರ ಮೊಗದಲಿ
ಎಂತಹ ಕಳೆ ಇತ್ತು

# ಶಹಪುರ ತಾಲೂಕಿನ ಶಾಸನಗಳು : ಒಂದು ವಿವೇಚನೆ

ರಂಗರಾಜ ವನದುರ್ಗ

ಒಂದು ನಾಡಿನ ಚರಿತ್ರೆ ರೂಪಿಸಲು ಸಹಾಯಕವಾಗುವ ಅನೇಕ ದಾಖಲೆಗಳಂತೆ ಅಲ್ಲಿಯ ಶಾಸನಗಳು ಬಹುಪ್ರಮುಖ ಪಾತ್ರವಹಿಸುತ್ತಿವೆ, ಅಂದು ಕಲ್ಲಿನ ಮೇಲೆ ಕೊರೆದ ಬರಹಗಳು ಇಂದು ಕೇವಲ ಮೂಕ ಸಾಕ್ಷಿಯಾಗಿರಬಹುದು. ಆದರೆ ಆ ಶಿಲಾ ಲೇಖಗಳು ಇಡಿ ನಾಡಿನ ಐತಿಹಾಸಿಕ ಸ್ವರೂಪಕ್ಕೆ ರೂಪ ಕೊಡುವಲ್ಲಿ ಬಲವಾದ ಆಧಾರಗಳಾಗಿರುತ್ತವೆ. ಈ ದೃಷ್ಟಿಯಿಂದ ಶಹಪುರ ತಾಲೂಕಿನ ಸಾಂಸ್ಕೃತಿಕ ಚರಿತ್ರೆಯ ಚೌಕಟ್ಟು ಕಟ್ಟಲು ಇಲ್ಲಿಯ ಶಾಸನಗಳು ಅತ್ಯಂತ ಮಹತ್ವಪೂರ್ಣ ಸಾಮಗ್ರಿಯೆನಿಸಿವೆ.

ಸಗರನಾಡಿಗೆ ಕೇಂದ್ರಬಿಂದುವಾಗಿರುವ ಶಹಪುರ ತಾಲುಕವು ಭೌಗೋಲಿಕ ದೃಷ್ಟಿಯಿಂದ ಬಹು ರಮಣೀಯ ಬೀಡು. ಕಾಲಾನುಕ್ರಮದಲ್ಲಿ ಈ ನಾಡನ್ನು ಆಳಿಹೋದ ಅನೇಕ ಅರಸರು ತಮ್ಮ ಕಾಲದಲ್ಲಿ ಹೊರಡಿಸಿದ ಆಜ್ಞೆ, ಕೆತ್ತಿಸಿದ ಆದೇಶಗಳೆಲ್ಲಾ ಶಾಸನಗಳೆನಿಸಿದವು. ಇಂಥ ಶಾಸನಗಳು ಶಹಪುರ ತಾಲೂಕಿನುದ್ದಕ್ಕೂ ಸಂಶೋದಿಸಿದರೆ ಸುಮಾರು ಮೂರು ನೂರು ಶಾಸನಗಳಾದರೂ ಸಿಗುವದರಲ್ಲಿ ಸಂಶಯವಿಲ್ಲ. ಇಂದು ಲಭ್ಯವಾದ ಎಂಭತ್ತು ಶಾಸನಗಳ ಆಧಾರದ ಮೇಲೆ ಶಹಪುರ ತಾಲೂಕಿನ ಸಮಗ್ರ ಚರಿತ್ರೆಯ ಚಿತ್ರ ಬಿಡಿಸಲು ಪ್ರಯತ್ನಿಸಬಹುದು.

ಸಗರನಾಡು 500 ರ ಭಾಗವಾದ ಶಹಪುರ ತಾಲೂಕವು ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ಹೈಹಯ, ಕಳಚೂರ್ಯ, ಶಿಲಾಹಾರ, ಸೇವುಣ, ಬಹಮನಿ. ಬಿಜಾಪುರ ಆದಿಲ್‌ಶಾಹಿ, ಹೈದ್ರಾಬಾದ ನಿಜಾಂ ಮತ್ತು ಬೇಡ ದೊರೆಗಳ ಆಡಳಿತಕ್ಕೆ ಒಳಪಟ್ಟಿತ್ತು. ಇಂದಿನ ವರೆಗೆ ದೊರೆತ ಶಾಸನಗಳಲ್ಲಿ ರಾಷ್ಟ್ರಕೂಟರ ಶಾಸನಗಳು ಪ್ರಾಚೀನವಾದರೆ ಸುರಪುರ ಅರಸರವು ಅರ್ವಾಚೀನದವುಗಳಾಗಿವೆ.

ಶಹಪುರ ತಾಲೂಕಿನಲ್ಲಿ ಇಂದು ದೊರೆತ ಅತ್ಯಂತ ಪ್ರಾಚೀನ ಶಾಸನವೆಂದರೆ ಕ್ರಿ, ಶ. 939 ರ ಶಿರವಾಳ ಶಾಸನ, ರಾಷ್ಟ್ರಕೂಟ 3ನೇ ಕೃಷ್ಣನ ಕಾಲಕ್ಕೆ ಕೆತ್ತಿಸಿದ ಈ

ಶಾಸನದಲ್ಲಿ "ಸಗರನಾಡು" ಮತ್ತು ಅದನ್ನು ಆಳುವ ಅಲ್ಲವುಂಡನೆಂಬ ಸಾಮಂತನನ್ನು ಉಲ್ಲೇಖಿಸುತ್ತದೆ.[1]

ಇತ್ತೀಚೆಗೆ ದೊರೆತ ಇದೆ ಶಿರವಾಳದ ಕ್ರಿ. ಶ. 1150 ರಲ್ಲಿಯ ಇನ್ನೊಂದು ಶಾಸನವು ಚಾಲುಕ್ಯ ಭೂಲೋಕಮಲ್ಲನಾದ 3ನೇ ಸೋಮೇಶ್ವರನ ಕಾಲದ್ದು. "ಮಹಾ ಮಂಡಳೇಶ್ವರ ಸೋವಿದೇವನು ಸಗರವರ್ಾಣಿಂಬಾಡದ ಹೆಗಡೆ ದಂಡನಾಯಕಂ ಅಲ್ಲ ಪುರಿಯರಿಯರಸರುಂ ಸಿರಿವೊಳಲ ಪ್ರಭು ನಾಲ್ವರಸೆಟ್ಟಿಯರು ಕದಂಬೇಶ್ವರ ಜೀರ್ಣೋದ್ಧಾರಕ್ಕೆ" ಭೂಮಿಯನ್ನು ದತ್ತಿಕೊಟ್ಟ ವಿಷಯ ಉಲ್ಲೇಖಿಸಲಾಗಿದೆ.[2]

ಇಲ್ಲಿಯ ಮಹತ್ವದ ವಿಷಯವೆಂದರೆ ಸಗರನಾಡು, ದಂಡನಾಯಕ ಅಲ್ಲಿಪುರಿಯರಸ ಮತ್ತು ಕದಂಬರೇಶ್ವರ ಎನ್ನುವ ದೇವಾಲಯ. ಕ್ರಿ. ಶ. 1188 ರ ಶಿರವಾಳದ ಮತ್ತೊಂದು ಶಾಸನದಲ್ಲಿ[3] "ಶಿರಾಳವಂಶದ ಮಂಡಳೇಶ್ವರ ಆಲಮೇಲದ ಸಿಂಗಿದೇವರಸ ಮತ್ತು ಆತನ ಅವ್ವ ನಾಗಲದೇವಿಯರು ಮಹಾಪ್ರಧಾನ ಸೇನಾಪತಿಯಾದ ಘಟ್ಟಿಯ ಕೇತೆಯನಾಯಕ ಹಾಗೂ ಭಿಲ್ಲಮದೇವರ ಮಹಾಪ್ರಸಾಯಿತರಾದ ಪೆಯ್ಮಾಕರ ಸಮಕ್ಷಮದಲ್ಲಿ ಶಾಲಿವಾಹನ ಶಕೆ 1110ರಲ್ಲಿ ಶಿರವಾಳದ ಸಿದ್ಧಸಾತೇಶ್ವರ ದೇವರ ಅಂಗಬೋಗ, ರಂಗಬೋಗಕ್ಕಾಗಿ ಎಳಮೇಲ ೩೦ ರ ಬಳಿಯ ಮುರುವಡಿ ಮತ್ತು ಅದರಲ್ಲಿಯ ನಿಧಿ, ನಿಧಾನ, ನಿಕ್ಷೇಪ, ಪಾಷಾಣ. ವೃಕ್ಷ, ಗುಲ್ಮ, ಕಲ್ಲಕಣಿ, ದಂಡದೋಷ, ಕಾಣಿಕೆಗಳನ್ನೆಲ್ಲ ವತ್ತಿಯಾದಿ ಬಿಟ್ಟ ವಿಷಯ ಇಲ್ಲಿ ಪ್ರಸ್ತಾಪಿಸಲಾಗಿದೆ. ಇಲ್ಲಿ ಉಲ್ಲೇಖಗೊಂಡ ಸಿದ್ಧಸಾಲೇಶ್ವರ ದೇವಾಲಯವೇ ಇಂದಿನ ಸಿದ್ಧಲಿಂಗೇಶ್ವರ ದೇವಾಲಯವಾಗಿದೆ. ಮುರುವಡಿಯೆಂದರೆ ಇಂದಿನ ಸಿಂದಗಿ ತಾಲೂಕಿನ ಮುರುಡಿ ಗ್ರಾಮವೇ ಅಂದು ಆಲಮೇಲ ಆಡಳಿತೆಯ ಭಾಗವಾಗಿತ್ತು.

ಮದ್ರಿಕಿ ಗ್ರಾಮದಲ್ಲಿ ದೊರೆತ ನಾಲ್ಕು ಶಾಸನಗಳ ಪೈಕಿ ದರ್ಮ್ಮೂತಿ ತೋಟದಲ್ಲಿಯ ಜಕದೇಕಮಲ್ಲನ ಶಾಸನವು ಶಹಪುರ ತಾಲೂಕಿನ ಕೆಲವೊಂದು ಗ್ರಾಮನಾಮಗಳ ಮೇಲೆ ಹೊಸಬೆಳಕು ಬೀರುತ್ತದೆ. ಈ ಶಾಸನ ಪ್ರಕಾರ ಚಾಳುಕ್ಯ ಜಗದೇಕಮಲ್ಲನು ಯಾದಗೀರ ರಾಜಧಾನಿಯನ್ನಾಗಿಸಿಕೊಂಡು ಆಳುತ್ತಿರುವಾಗ ದೇವರಸನೆಂಬ ವ್ಯಕ್ತಿ ಈತನ ಮಾಂಡಳಿಕನಾಗಿದ್ದ ಸಂದರ್ಭದಲ್ಲಿ ಮದ್ದರಕಿ ನಗರದ ಸರ್ವದೇವಭಟ್ಟರು ಮತ್ತು ಐನೂರ್ವರು ಕೂಡಿಕೊಂಡು ಕ್ರಿ. ಶ. 1020 ರಲ್ಲಿ ಧರ್ಮಾರ್ಥವಾದಿ ಸಿರಿವಾಳವಾರಿಯಿಂದ ದಕ್ಷಿಣಕ್ಕೆ ಮತ್ತು ಹೊನ್ನಂಬಟ್ಟೆಯಿಂದ ಪೂರ್ವಕ್ಕೆ ಮುವತ್ತು ಮತ್ತರ

1) ಶ್ರೀ ನಾಗರಾಜರಾವ– ಸಂಯುಕ್ತ ಕರ್ನಾಟಕ 30–11–1975.
2) ಶ್ರೀ ಬಸವರಾಜ ದೇಶಮುಖ್— ಸಗರನಾಡು ದರ್ಶನ ಪುಟ 179.
3) ಶ್ರೀ ಬಿ. ಆರ್. ಸುರಪುರ– ವಿದ್ಯಾಶ್ರೀ 1988 ಪುಟ 67.

ಭೂಮಿಯುನ್ನು ಹಾಗೂ ಒಂದು ಮನೆ, ಒಂದು ಹೂದೋಟವನ್ನು ಎಮ್ಮೇಶ್ವರಲಿಂಗಕ್ಕೆ ದತ್ತಿಯಾಗಿ ಬಿಟ್ಟ ವಿಷಯ ತಿಳಿಸಲಾಗಿದೆ. ಇಲ್ಲಿಯ ಗಮನಾರ್ಹ ಗ್ರಾಮನಾಮಗಳೆಂದರೆ ಏತಗಿರಿಯೆಂಬುದು ಯಾದಗೀರನ್ನು ಕುರಿತಾದರೆ; ಹೊನ್ನಂಬಟ್ಟೆಯೆಂಬುದು ಹೋತ ಪೇಟ ಗ್ರಾಮವನ್ನು ಸೂಚಿಸುತ್ತದೆ. ಹೊತಪೇಟ ಪೂರ್ವಕ್ಕೆ ಸಿರಿವಾಳ ಗ್ರಾಮದ ದಕ್ಷಿಣಕ್ಕೆ ಬಿಟ್ಟ ಅಂದಿನ ಭೂಮಿಯುನ್ನು ಇಂದು ಸಂಶೋಧಕರು ಶೋಧಿಸಬೇಕಾಗಿದೆ

ಕ್ರಿ.ಶ.1076 ರಲ್ಲಿಯ ಚಾಳುಕ್ಯ ಚಕ್ರವರ್ತಿ 6ನೇ ವಿಕ್ರಮಾದಿತ್ಯ ದೇವನ ಕಾಲಕೆ ಬರೆಯಿಸಲ್ಪಟ್ಟ ಧರಿಯಾಪುರ ಶಾಸನವು ಚರಿತ್ರೆ ದೃಷ್ಟಿಯಿಂದ ಬಹು ಪ್ರಮುಖವಾಗಿದೆ. ಜೋಗಿನಕರೆ ನಿರ್ಮಾಣಕ್ಕೆ ದತ್ತಿಬಿಟ್ಟ ದಂಡನಾಯಕನ ಉಲ್ಲೇಖ ಇಲ್ಲಿದೆ. ಇದೇ ಕಾಲದ ವಡಿಗೇರಿ ಶಾಸನಗಳು ಅತ್ಯಂತ ಗಮನಾರ್ಹವಾದವುಗಳು. ಕಲ್ಯಾಣ ಚಾಳುಕ್ಯರು ಶಹಪುರ ತಾಲೂಕಿನಲ್ಲಿ ಆಳಿದ ಆಳ್ವಿಕೆಯ ವಿಶಿಷ್ಟ ದಿನಗಳನ್ನು ತಿಳಿಸುವದರೊಂದಿಗೆ ಕ್ರಿ. ಶ. 1076 ರಲ್ಲಿ ಆರಂಭಿಸಿದ ಆರನೆಯ ವಿಕ್ರಮಾದಿತ್ಯನ ವಿಕ್ರಮ ಶಕೆಯನ್ನು ಪ್ರಥಮ ಬಾರಿಗೆ ತಿಳಿಸಿದ ಶಾಸನ ಶಹಪುರ ತಾಲೂಕಿನ "ವಡಿಗೇರಿ" ಗ್ರಾಮಕ್ಕೆ ಸಲ್ಲುತ್ತದೆ. ಅಲ್ಲದೆ ವಿಕ್ರಮಾದಿತ್ಯನು ತನ್ನ ಪಟ್ಟಬಂಧೋತ್ಸವ ಸಮಾರಂಭವನ್ನು ಇದೇ ತಾಲೂಕಿನ "ನಡ್ಯಾಳ" ಗ್ರಾಮದಲ್ಲೆ ನೆರವೇರಿಸಿಕೊಂಡ ಬಗ್ಗೆ ಶಾಶನ ತಿಳಿಸು ತ್ತದೆ. ಇನ್ನೂ ಹೆಚ್ಚಿನ ವಿಷಯಗಳೆಂದರೆ ಅಲ್ಲಪುಲಿಯರಸ ಎಂಬ ದಂಡನಾಯಕನ ಸಮಕ್ಷಮ ಧಾಯಿಮಯ್ಯನೆಂಬ ಸಾಮಂತ ವಡಿಗೇರಿಯ ಧಾಯಿಮೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕೆ ಮತ್ತು ಅಂಗಭೋಗ, ರಂಗಭೋಗದ ವೆಚ್ಚಕ್ಕೆ ಭೂಮಿಯುನ್ನು ದಾನಮಾಡಿದ ಸಂಗತಿ ಹೇಳುತ್ತದೆ. ಅಲ್ಲದೆ ಎಳಮೇಲೆಯ ಸಿಂಹಪರ್ಷಿ ಸಂಪ್ರದಾಯ ಕ್ಕೊಳಪಟ್ಟ ಪಂಡಿತನ ಮುಖಂಡತ್ವದೆಲ್ಲಿದ್ದ ಮಠಕ್ಕೆ ಮತ್ತು ಮಠದಲ್ಲಿದ್ದು ಓದುತ್ತಿದ್ದ ವಿದ್ಯಾರ್ಥಿಗಳ ಊಟ ವಸತಿಗಾಗಿ ಭೂಮಿಯನ್ನು ದತ್ತಿ ಬಿಟ್ಟ ವಿಷಯ ಉಲ್ಲೇಖಿಸ ಲಾಗಿದೆ.[4]

ಕಲ್ಯಾಣ ಚಾಳುಕ್ಯ ತ್ರಿಭುವನ ಮಲ್ಲನ ಕಾಲದ ಕನ್ನಡ ಶಾಸನವೊಂದು ಗೋಗಿ ಗ್ರಾಮದ ಇಂದಿನ ಚಂದಾಹುಸೇನಿ ದರ್ಗಾದ ಹತ್ತಿರ ದೊರಕಿದೆ. ಆದರಲ್ಲಿ "ದಂಡ ನಾಯಕ ದುಗ್ಗರಸ ಮತ್ತು ಹೆಗ್ಗಡೆ ನಾಕರಸರ ಉಲ್ಲೇಖವಿದೆ. ಇದಲ್ಲದೆ ಇಲ್ಲಿಯ ಮಹತ್ವಪೂರ್ಣ ವಿಷಯವೆಂದರೆ ಸಂಗಮೇಶ ವೇವಾಲಯವಿದ್ದು, ಅದರ ವೃದ್ಧಿಗಾಗಿ ಸಾಕಷ್ಟು ದತ್ತಿಬಿಟ್ಟ ವಿಷಯ ಪ್ರಸ್ತಾಪಗೊಂಡಿದೆ, ಇಂದು ಗೋಗಿಯಲ್ಲಿ ಶೋಧಿಸಿ ದರೆ ತ್ರಿಭುವನಮಲ್ಲನ ಕಾಲದಲ್ಲಿದ್ದ ಸಂಗಮೇಶ ದೇವಾಲಯವು ಸಿಗುವುದಿಲ್ಲ.

---

4) ರಂಗರಾಜ –"ವಡಿಗೇರಿ ಶಾಸನ : ಒಂದು ವಿವೇಚನೆ"
– ಕೆ. ಆರ್. ಆಯ್, ಧಾರವಾಡ 1989-90.

ಶಹಪುರ ತಾಲೂಕಿನ ಪ್ರಾಚೀನ ಶಾಸನಗಳಲ್ಲಿ ಇನ್ನೂ ಓದದೆ ಉಳಿದಿರುವ ಮದ್ರಕಿ, ಮುಡಬೂಳ. ಇಬ್ರಾಹಿಂಪುರ, ಚಟ್ನಳ್ಳಿ, ಬಲ್ಕಲ್, ಗುರುಸುಣಗಿ, ಭೀಮರಾಯನಗುಡಿ, ಉಮ್ಮರದೊಡ್ಡಿ ಮುಂತಾದ ಊರುಗಳಲ್ಲಿಯ ಶಾಸನಗಳಿಂದ ಶಹಪುರ ತಾಲೂಕಿನ ಚರಿತ್ರೆಗೆ ಹೊಸರೂಪ ಸಿಗುವಲ್ಲಿ ಸಂಶಯವಿಲ್ಲ.

ಶಹಪುರ ಬೆಟ್ಟದ ಮೇಲಿರುವ "ಸಗರಗಡ"ದ ತರುವಾಯ ನಿರ್ಮಾಣಗೊಂಡ ನವನಗರವೇ "ಹೊಸ ಸಗರ". ಮುಸ್ಲಿಂ ಅರಸು ಮನೆತನಗಳಿಗೆ ದಕ್ಷಿಣದಲ್ಲಿ ಆಡಳಿತ ಪ್ರಾಂತವಾಗಿದ್ದ ಈ ಸಗರವು ಸೈನಿಕರನ್ನು ನೇಮಿಸಿಕೊಳ್ಳುವ ಶಿಬಿರಸ್ಥಾನವಾಗಿತ್ತು. ಇಲ್ಲಿ ಲಭ್ಯಗೊಂಡ 21 ಶಾಸನಗಳಲ್ಲಿ 10 ಶಾಸನಗಳು ಬಹುಮನಿ ಅರಸರಿಗೆ ಸಂಬಂಧಿಸಿದರೆ, ಉಳಿದ 11 ಶಾಸನಗಳು ಆದಿಲ್‌ಶಾಹಿ ಮನೆತನಕ್ಕೆ ಸೇರಿವೆ,

2ನೇ ಮಹ್ಮದ್‌ಷಾನ ರಾಜಾಜ್ಞೆಯಂತೆ ಕೋತವಾಲದ ಮುಬಾಕರನು ಕ್ರಿ. ಶ. 1310–11 ರಲ್ಲಿ ಸಗರನಲ್ಲಿ ಅನೇಕ ಕಟ್ಟಡ ಹಾಗೂ ಸಗರಕ್ಕೆ ರಕ್ಷಣಾ ಗೋಡೆಯನ್ನು ನಿರ್ಮಿಸಿದ ಬಗ್ಗೆ ಆಷೇರಖಾನ ಕಟ್ಟಡದ ಮೇಲಿರುವ ಶಾಸನ ತಿಳಿಸುತ್ತದೆ, ಏಳು ಸಾಲುಗಳಲ್ಲಿರುವ ಈ ಶಾಸನವು "ಸಗರ" ವೆಂಬ ನಗರದಾಮ ಸ್ಪಷ್ಟಪಡಿಸುತ್ತದೆ.

ಹಜರತ್ ಶೂಫಿಶರ್ಮಸ್ತ ಘೋರಿ ಮೇಲಿರುವ ಕ್ರಿ. ಶ, 1391–92 ರ ಪರ್ಶಿಯನ್ ಶಾಸನವೊಂದು "ಬಹಮನಿ ದೊರೆಯೂ ಪರ್ಶಿಯಾ ದೇಶದ ಮೂಲದವನೆಂದು ಖಚಿತಪಡಿಸುತ್ತದೆ. ಏಳು ಸಾಲಿನಲ್ಲಿರುವ ಈ ಶಾಸನವನ್ನು ಘರೀದ ಎಂಬ ಲಿಪಿಕಾರ ಬರೆದ ಬಗ್ಗೆ ವ್ಯಕ್ತವಾಗುವದು. ಶೇಖ ಮನ್ಸೂರ ಬಾದಷಾ ಮಸೀದಿಯು ಬಹಮನಿ ಮತ್ತು ಆದಿಲ್‌ಶಾಹಿ ಮನೆತನದ ಅನೇಕ ಶಾಸನಗಳನ್ನು ಹೊಂದಿದೆ ಅದರಂತೆ ಫಿರೋಜ ಷಾ ಬಹುಮನಿಯು ಕ್ರಿ. ಶ. 1407 ರಲ್ಲಿ ಸಗರದ ಮುಖ್ಯ ದ್ವಾರವನ್ನು ನಿರ್ಮಿಸಿದ ಬಗ್ಗೆ ಹೇಳುತ್ತದೆ. ಹಜರತ್ ಮನ್ಸೂರ ಶಹಾನ ಘೋರಿಯ ಅಧಿಷ್ಠಾನದ ಮೇಲಿರುವ ಶಾಸನವೊಂದರಲ್ಲಿ ಫಿರೋಜಶಹನ ಆದೇಶದಂತೆ ಕೋತವಾಲನಾದ ಮುಬಾಕರನು ಸಗರನಗರದಲ್ಲಿ ಅನೇಕ ಬುರುಜುಗಳನ್ನು ಮತ್ತು ದ್ವಾರ ಬಾಗಿಲುಗಳನ್ನು ಕಟ್ಟಿಸಿದ ಬಗ್ಗೆ ಉಲ್ಲೇಖಿಸುತ್ತದೆ. ಪರ್ಶಿಯಾ ಭಾಷೆಯಲ್ಲಿರುವ ಒಂಭತ್ತು ಸಾಲಿನ ಈ ಶಾಸನವು ಜಮಾಲುದ್ಧೀನ ಮುಫ್ತಿಯು ಬರೆಸಿದನೆಂದು ಹೇಳಲಾಗಿದೆ. ಮನ್ಸೂರ ಬಾದಶಹ ಘೋರಿಯ ಹತ್ತಿರದ ಕಂಬದ ಮೇಲಿರುವ ಒಂದು ಅಡಿ ಆರು ಇಂಚು ಉದ್ದ. ಒಂದು ಅಡಿ ನಾಲ್ಕು ಇಂಚು ಅಗಲವಿರುವ ಈ ಶಾಸನವು

---

ಪಾರಸಿ ಶಾಸನ ಓದುವಲ್ಲಿ ಸಹಕರಿಸಿದ ಶ್ರೀ ಅರುಣಗೆ ಋಣಿಯಾಗಿರುವೆ.

ಪರ್ಶಿಯಾ ಭಾಷೆಯಲ್ಲಿದ್ದು ಮುಖ್ಯ ಮೂರು ಸಾಲುಗಳಲ್ಲಿದೆ. "ಅಮ್ಮಾಹಿವಾ ಎಂಬ ಮಹಿಳೆಯಿಂದ ಮಸೀದೆಯನ್ನು ಕಟ್ಟಿಸಲಾದ ಬಗ್ಗೆ ಈ ಶಾಸನ ವ್ಯಕ್ತಿಸುತ್ತದೆ" ಅದರಂತೆ ಸಗರದಲ್ಲಿರುವ ಇನ್ನು ಹಲವಾರು ಶಾಸನಗಳು ಸಗರ ನಗರದ ಮೇಲೆ ಹೊಸ ಬೆಳಕು ಬೀರುವದರಲ್ಲಿ ಯಶಸ್ವಿಯಾಗಿವೆ,

ತಾಲೂಕಿನ ಕೇಂದ್ರ ಸ್ಥಳವಾದ ಶಹಪುರ ನಗರವು ಮುಸ್ಲಿಂ ಅರಸರ ಕಾಲಕ್ಕೆ ಕೆತ್ತಿಸಲ್ಪಟ್ಟ ಪ್ರಮುಖ ಏಳು ಶಾಸನಗಳನ್ನು ಹೊಂದಿದೆ. ಬಿಜಾಪೂರ ಆದಿಲ್‌ಶಾಹಿ ಸನದುಗಳಲ್ಲಿ ಇದಕ್ಕೆ "ನಾಮಾಲೆ ನಸರತಬಾದ" ಎಂದು ಹೆಸರಿಸಲಾಗಿದೆ ಅದಕ್ಕಿಂತ ಪೂರ್ವಕಾಲಕ್ಕೆ ಬಹುಮನಿ ಅರಸರು ಇದಕ್ಕೆ "ಸಗರಗಡ" ಎಂದು ಕರೆದಿದ್ದರು. ಈ ಪ್ರಾಂತ್ಯವು ಕಿಲ್ಲೆ ಸಹಿತ ದೇವಗಿರಿ ಯಾದವರ ರಾಜ್ಯದಲ್ಲಿತ್ತೆಂದು ಅಲ್ಲಾವುದ್ದೀನ ಖಿಲ್ಜಿಯ ಕಾಲಕ್ಕೆ ಮುಸಲ್ಮಾನ ದಳವಾಯಿ ಕ್ರಿ. ಶ. 1300 ರಲ್ಲಿ ಪ್ರಖ್ಯಾತಿ ಪಡೆದಾಗ ಬರೆಯಿಸಿದ ಪಾರಸಿ ಶಾಸನಗಳಿಂದ ತಿಳಿದು ಬರುತ್ತದೆ.[5]

ಕ್ರಿ, ಶ, 1555 ರಲ್ಲಿ ಬಿಜಾಪೂರ ಸುಲ್ತಾನ ಇಬ್ರಾಹಿಂ ಆದಿಲ್‌ಷಾಹಿ ಆಳ್ವಿಕೆಯಲ್ಲಿ ಕೆತ್ತಿಸಿದ ಶಹಪುರ ಬೆಟ್ಟದ ಮೇಲಿರುವ ಕೋಟೆಯ ಎರಡನೇ ದ್ವಾರದ ಮೇಲಿನ ಶಾಸನವು "ಮುಹಮ್ಮದ ಯುಸೂಫ" ಸದರಿ ಕೋಟೆಯ ಸಿದ್ಧತೆಗೆ ಕಾರಣನಾದನೆಂದು ತಿಳಿಸುತ್ತದೆ. ಶಹಪುರ ನಗರದಲ್ಲಿ ದೊರೆಯುವ ಅತ್ಯಂತ ಮಹತ್ವಪೂರ್ಣ ಶಾಸನವೆಂದರೆ ನಗರದ ಪಶ್ಚಿಮ ದ್ವಾರದ (ದಿಗ್ಗಿ ಅಗಸಿ) ಮೇಲ್ಭಾಗದಲ್ಲಿರುವ ಶಾಸನ. ಇದು ಕಿ, ಶ. 1558 59 ರಲ್ಲಿ ಬಿಜಾಪೂರ ಸುಲ್ತಾನನಾದ ಅಲಿ ಆದಿಲ್‌ಷಾಹಿ ಕೆತ್ತಿಸಿದನು. ಶಾಸನದ ಮುಖ್ಯ ವಿಷಯವೆಂದರೆ "ಬಿಸ್ಮಿಲ್ಲಾ" ಎಂಬ ಮುಸ್ಲಿಂ ದೈವ ಸ್ತುತಿಯೊಂದಿಗೆ ಆರಂಭಗೊಂಡು ಖುರಾನದ ಅರವತ್ತೊಂದನೆಯ ಅಧ್ಯಾಯದ ಮತ್ತು ಮೂವತ್ತೊಂದನೆ ಸಾಲು ಹಾಗೂ ಹನ್ನೆರಡನೆಯ ಅಧ್ಯಾಯದ ಅರವತ್‌ನಾಲ್ಕನೆಯ ಪಂಕ್ತಿ ಸಮಾವೇಶಗೊಂಡಿದೆ. ಈ ಶಹಪುರ ನಗರ ನಿರ್ಮಾಣ ಇದೇ ಸಮಯಕ್ಕೆ ಮಾಡಲಾಯಿತೆಂದು ಶಾಸನದಿಂದ ತಿಳಿದು ಬರುತ್ತದೆ. ನಿರ್ಮಾಣಗೊಂಡ ಈ ನಗರಕ್ಕೆ "ನಸರತಬಾದ"ಎಂದು ನಾಮಕರಣ ಮಾಡಲಾಯಿತು. ಅದುವೆ ಮುಂದೆ ಬಿಜಾಪುರ ಆದಿಲ್‌ಷಾಹಿ ಕಾಲಕ್ಕೆ "ಶಹಪುರ" ವೆಂದು ಮಾರ್ಪಾಡಾಯಿತು.

ಶಹಪುರ ಕೋಟೆಯ ಮೊದಲದ್ವಾರದ ಮೇಲಿರುವ ಕ್ರಿ, ಶ. 1567–68 ರ ಪಾರಸಿ ಶಾಸನವು ಮೂಲತಃ ದೇವದುರ್ಗಕ್ಕೆ ಸಂಬಂಧಿಸಿದ್ದು, ಶಾಸನದ ಮುಖ್ಯ ವಿಷಯವೆಂದರೆ ದೇವದುರ್ಗದ ಹೊರ ಕಾವಲು ಗೋಡೆ ಬಿದ್ದು ಹೋಗಿದ್ದ ಪ್ರಯುಕ್ತ ಇಲ್ಲಿಯ ಜನಕ್ಕೆ ಪುನರ್ ವಸತಿ ಮಾಡಿ ಕ್ರಿ.ಶ. 1567-68 ರಲ್ಲಿ ಮೀರ ತಾಜೋದ್ದೀನ

5) ಕಪಟರಾಳ– ಸುರಪುರ ಸಂಸ್ಥಾನ ಇತಿಹಾಸ ಪುಟ–12.

ನೆಂಬ ಕಿಲ್ಲೆದಾರ ಅಲಿಆದಿಲ್‌ಷಾಹಿ ಆಡಳಿತಕ್ಕೆ ಒಳಪಟ್ಟಾಗ ಶಹಪುರ ಕೋಟೆಯ ಮಹ್ಮದಿ ಬುರುಜಿನ ಮೇಲೆ ಈ ಶಾಸನ ಕೆತ್ತಿ ಇರಿಸಲಾಯಿತು.

ಶಹಪುರ ಕೋಟೆಯಲ್ಲಿ ದೊರೆಯುವ ನಾಲ್ಕನೆಯ ಶಾಸನವೆಂದರೆ ಮಹ್ಮದ ಬುರುಜಿನಲ್ಲಿರುವ ಕ್ರಿ.ಶ. 1566-67 ರಲ್ಲಿ 2ನೇ ಅಲಿಆದಿಲ್‌ಷಾಹಿ ಶಾಸನ ಮಹ್ಮದ ಬುರುಜನ್ನು ಕ್ರಿ. ಶ. 1566 ರಲ್ಲಿ ನಿರ್ಮಿಸಿದನೆಂದು ತಿಳಿಸುತ್ತದೆ.

ಪುರಸಭೆಯ ಪಶ್ಚಿಮದ ಚಂದಣ್ಣನ ಬಾವಿಯಲ್ಲಿ ಹೊಡೆದು ಬಿದ್ದಿರುವ ಶಾಸನದಲ್ಲಿ ಅಬ್ದುಲ್ ಹಸನನು ಜುನಿದಬೀಯ ಸ್ಮರಣೆಗಾಗಿ ಒಂದು ಘೋರಿ ಹಾಗೂ ಒಂದು ಮಸೀದಿಯನ್ನು ಕಟ್ಟಿಸಿದ ಉಲ್ಲೇಖವಿದೆ. ಸದ್ಯಕ್ಕೆ ಆ ಘೋರಿ, ಮಸೀದಿಗಳು ಶಹಪುರದಲ್ಲಿ ಎಲ್ಲಿವೆಯೆಂದು ತಿಳಿದಿಲ್ಲ.

ಶಹಪುರ ಕೋಟೆಯೊಳಗಿನ ಮಂದಾಗ್ನಿ ಬಾವಿಯೆದುರಿನ ಬುರುಜಿನಲ್ಲಿರುವ ಕ್ರಿ, ಶ. 1566-67ರ ಪರ್ಶಿಯನ್ ಭಾಷೆಯ ಶಾಸನವೊಂದು "ಈ ಕಟ್ಟಡದ ಉಸ್ತುವಾರಿಯ ಕಿಲ್ಲೆದಾರ ಷಹ ರಝಾಕನ ಆಳ್ವಿಕೆಯಲ್ಲಿ ಕಟ್ಟಿಸಲಾಯಿತ್ತೆಂದು ತಿಳಿಸುತ್ತದೆ. ಕೊನೆ ಶಾಸನ 2ನೇ ಅಲಿ ಆದಿಲ್‌ಷಾಹಿ ಕಾಲದ್ದು. "ಹಜರತ್ ಮೂಸಾಖಾದ್ರಿ ಮಸೀದಿಯನ್ನು" ಕ್ರಿ, ಶ. 1667-68 ರಲ್ಲಿ ಶೇಖ ಅಬ್ದುಲ್ ಹಸನ್ ಕಟ್ಟಿಸಿದ ಬಗ್ಗೆ ಹೇಳುತ್ತದೆ. ಈ ಶಾಸನವನ್ನು ಡಾ. ಯಾಜದಾನಿಯವರು ಹೈದ್ರಾಬಾದ ಪ್ರಾಚ್ಯ ಸಂಗ್ರಹಾಲಯದಲ್ಲಿಟ್ಟಿದ್ದಾರೆ.

ಶಹಪುರ ವಿಶ್ವಕರ್ಮ ಏಕದಂಡಗಿಮಠದಲ್ಲಿ ದೊರೆತ ಶಾಸನ ವಿಜಯನಗರ ಕೃಷ್ಣದೇವರಾಯನು ಕ್ರಿ. ಶ, 1520 ರಲ್ಲಿ ವಿಶ್ವಕರ್ಮ ಮಠಕ್ಕೆ ಕೊಟ್ಟ ಜಯರೇಖಾ ತಾಮ್ರಪತ್ರದಿಂದ "ಶಹಪುರ ವಿಶ್ವಕರ್ಮ ಮಠಗಳು ವಿಜಯನಗರದ ಆಳ್ವಿಕೆಯಲ್ಲಿ ಧರ್ಮದತ್ತಿ ಖಾತೆಗೆ ಒಳಪಟ್ಟಿತೆಂದು ಖಚಿತಪಡುತ್ತದೆ.[7] ತಾಮ್ರಪಟದಲ್ಲಿರುವ ವಿಷಯವೆಂದರೆ ಅಂತರವಳ್ಳಿಯ ನಿರಂಜನಯ್ಯ ಮತ್ತು ಮೂರು ಝಾವದಯ್ಯನವರು ಆನೇಗುಂದಿಯ ವಿಶ್ವಕರ್ಮ ಪೀಠಕ್ಕೆ ಯಾರು ಬಾಧ್ಯಸ್ಥರೆಂದು ಇಲ್ಲಿ ಪೀಠಾಧಿಕಾರಿಗಳಾದ ಸದ್ಯೋಜಾತಸ್ವಾಮಿಯೊಡನೆ ವ್ಯಾಜ್ಯ ಹೂಡಿದಾಗ ವಿಜಯನಗರ ಸಿಂಹಾಸನಾಧೀಶ್ವರ ಶ್ರೀಕೃಷ್ಣದೇವರಾಯನ ಸಮ್ಮುಖದಲ್ಲಿ ತ್ರಿಮತಸ್ಥ ಪಂಡಿತರ ಸಭೆಯನ್ನು ಏರ್ಪಡಿಸಿ ವಾದಿ-ಪ್ರತಿವಾದಿಗಳಿಂದ ಕಟ್ಟುತ್ತರಗಳನ್ನು ಬರೆಯಿಸಿಕೊಂಡು ಅವರು ಒದಗಿಸಿದ ಸಾಕ್ಷಿ ಆಧಾರಗಳ ಮೇಲೆ ಸದ್ಯೋಜಾತ ಸ್ವಾಮಿಗಳೇ ಆ ಪೀಠಕ್ಕೆ ಬಾಧ್ಯಸ್ಥರೆಂದು ತೀರ್ಪು ನೀಡಿ ಅವರಿಗೆ ಜಯರೇಖಾ ಪತ್ರವನ್ನು ಕೊಟ್ಟರು. ಇದುವೆ ತಾಮ್ರಪಟದ ಬರವಣಿಗೆಯಾಗಿದೆ. ಎಂದು ಸುರಪುರ ಅಭಿಪ್ರಾಯಪಟ್ಟಿದ್ದಾರೆ,

7) ಬಿ. ಆರ್. ಸುರಪುರ –ವಿದ್ಯಾಶ್ರೀ 1588

ಶಹಪುರ ತಾಲೂಕಿನಲ್ಲಿ ದೊರೆಯುವ ಕೊನೆಯು ಶಾಸನಗಳೆಂದರೆ ಸುರಪುರ ಬೇಡದೊರೆಗಳ ವನದುರ್ಗ ಶಾಶನ. ಕ್ರಿ. ಶ. 1747-52 ರಲ್ಲಿ ಮೊಂಡುಗ್ಯೆ ವೆಂಕಟಪ್ಪನಾಯಕನ ಆಳ್ವಿಕೆಯಲ್ಲಿ ಕಟ್ಟಿಸಿದ ವನದುರ್ಗ ಕೋಟೆಯ ಪ್ರಥಮ ಹಾಗೂ ದ್ವಿತೀಯ ದ್ವಾರದ ಮೇಲ್ಭಾಗ ಕೆತ್ತಿಸಲಾಗಿದೆ. ಕೋಟೆಯ ಸ್ಥಾಪನೆ-ರಚನೆ-ಸ್ಥಾಪಕರನ್ನು ಕುರಿತು ಈ ಶಾಸನಗಳು ಹೇಳುತ್ತವೆ. ○

**ಶೋಭ ಸಂಗುಪ**

---

# ವಸಂತಕೆ .....

ತಂದಿತು ಚೈತ್ರವು ಹೊಸಕಳೆ
ಹಾಡಿತು ಕೋಗಿಲೆ
ಅರಳಿತು ನೈದಿಲೆ
ಆನಂದದ ವಸಂತದಲ್ಲೇ
ಚಿಗುರೊಡೆಯೆ ಮರಗಿಡ
ದಳ ಬಿರಿಯೆ ಹೂ ಬಿಡ
ಇಹುದೆಮ್ಮ ಸಂತಸವು ನಿಬಿಡ
ಮಾವು ಜೇನಿನ ಹನಿ
ಬೇವು ಬೆಲ್ಲದ ಕಹಿಸಿಹಿಯ ಖನಿ
ತಂದಿತು ಹೊಸ ಕಳೆ ವಸಂತದಿಂದ
ನವ ಸಂತಸದ ಸೌಂದರ್ಯ ನಿಧಿ
ಇರಲೆಲ್ಲರ ಬಾಳು ಸಂತಸದ ಹರಕೆ
ಇದುವೆ ಎನ್ನ ಹಾರೈಕೆ.

# "ಕ್ರಾಂತಿ"

— ರಾಜಶೇಖರ ಪಾಟೀಲ

"ಪ್ರಿತಿಯಿಲ್ಲದೇ ನಾನು
ಏನನ್ನೂ ಮಾಡಲಾರೆ
ದ್ವೇಷವನ್ನೂ ಕೂಡ
—ಚಂಪಾ

ಪ್ರಿಯ ಬೋಳಿ ಮಗನೇ,
'ಕ್ರಾಂತಿ ಕಳೆದು ಹೋಗಿದ್ದಾನೆ'

ಅಂತ ಪತ್ರಿಕೆಯಲ್ಲಿ ಜಾಹೀರಾತು ಕೊಡಬೇಕೆಂದಿದ್ದೆ. 'ಇಲ್ಲಾ' ನಕ್ಸಲಿಯರ ಗುಂಪು ಸೇರಿ ಸತ್ತೆ ಹೋಗಿದ್ದಾನೆ' ಎಂದು ಪುಣ್ಯತಿಥಿ ಆಚರಿಸಿ ನಮ್ಮ ಪಾರ್ಟಿ ಆಫೀಸಿನಲ್ಲಿ ನಿನ್ನದೊಂದು ಭಾವಚಿತ್ರ ತೂಗುಹಾಕಿ ನಿನ್ನನ್ನು ಮಹಾಕ್ರಾಂತಿಕಾರಿಗಳ ಸಾಲಿನಲ್ಲಿ ನಿಲ್ಲಿಸಿ ಜೀವನದುದ್ದಕ್ಕೂ ಹೆಮ್ಮೆಯಿಂದ ಬೀಗಬೇಕೆಂದು ಕೊಂಡಿದ್ದೆ. ಅಷ್ಟಿದ್ದರೂ ನನಗೆ ಗೊತ್ತಿತ್ತೋ ಮರಿ ನೀನು ಇಷ್ಟು ಬೇಗ ಸಾಯೋದಿಲ್ಲ ಅಂತ,

ಆದರೆ ಯಾವಳೋ ಹಾದರಗಿತ್ತಿಯ ಬದುಕಿನ ಹಮಾಲನಾಗಿ ಅವಳ ಸಂದಿಗೊಂದಿಗಳಲ್ಲಿ ದುಂಧುಮೆ ನಡೆಸುತ್ತಿದ್ದೀಯಾ ಅಂತಾನೂ ಹುಣಸಿ ಕಟ್ಟೆ ದಾಮೋದರನಿಂದ ಗೊತ್ತಾಯಿತು.

ನಿನ್ನೆ ರಾತ್ರಿ ಎಂಟುಗಂಟೆಯ ಸುಮಾರಿಗೆ ಅದೇ ಊಟಾ ಮುಗಿಸಿಕೊಂಡು ಕತ್ಲಳ್ಳಿಯ ಕಂತ್ರಿ ಬುದ್ಧಿ ಜೀವಿಗಳೊಂದಿಗೆ ಊರಿನ ಹಾಗೂ ದೇಶದ ಇತ್ತೀಚಿನ ವಿದ್ಯಾಮಾನಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದೆ. ಅಷ್ಟರಲ್ಲೇ ಈ ದಾಮೋದರ ಬಂದು ಬೊಂಬಾಯಿಯಲ್ಲಿ ಯಾವುದೋ ಜೋಪಡಿ ಪಟ್ಟಿ ಹತ್ತಿರ ಕ್ರಾಂತಿ ಭೇಟಿಯಾಗಿದ್ದ ಅಂತ ಹೇಳಿದ, ಖರೆ ಹೇಳಬೇಕಂದ್ರ, ಬಹಳ ಬಹಳ ಖುಷಿಯಾಗಿತ್ತು. ಹಾಂ ಕೊನೆಗೂ ನೀನು ಎಲ್ಲೋ ಪ್ರಾಣಿ ಪಕ್ಷಿ ಹಂದಿ ನಾಯಿಯಂತೆ ಜೀವಂತವಾದಿ ಬದುಕಿದ್ದೀಯಾ ಎನ್ನುವ ಒಂದೇ ಒಂದು ಚಿಲ್ಲರೆ ಕಾರಣಕ್ಕಾಗಿ ಖುಷಿಪಡುವ ಮಾಮೂಲಿ ಮನುಷ್ಯ ನಾನಲ್ಲ ಅಂತ ನಿನಗೂ ಚೆನ್ನಾದಿಗೊತ್ತು.

ಜೋಪಡಿ ಪಟ್ಟಿ ಅಂದ್ಮೇಲೆ ಅಲ್ಲೂ ಸಂಘಟನೆ, ಹೋರಾಟ, ಚಳುವಳಿ ಮತ್ತೆ ಶುರು ಮಾಡಿರಬಹುದೇ ? ಎಂಬ ಊಹೆಯೇ ನನ್ನ ಅತೀವ ಸಂತೋಷಕ್ಕೆ ಬಲವಾದ ಕಾರಣವಾಗಿತ್ತು. ಆದರೆ ದಾಮೋದರನಿಂದ ಹೊರಬಿದ್ದ ಹೊಸಗುಟ್ಟು ನನ್ನ ಕಿವಿಯ ತಮಟೆಯ ಮೇಲೆ ಬಿದ್ದಾ ಕ್ಷಣವೇ ಇಡೀ ನನ್ನ ದೇಹ ಪರಾವರ್ತಿತ ಪ್ರತಿಕ್ರಿಯೆಗೊಳಪಟ್ಟಿತ್ತು. ನೀನು ದಾಮೋದರನನ್ನು ಭೇಟಿಯಾಗಿದ್ದು ಜೋಪಡಿ ಪಟ್ಟಿ ಬಳಿಯಾಗಿದ್ದರೂ ನಿನ್ನ ಜೊತೆಗೆ ಬಿಳಿ ತೊಗಲಿನ ಬಂಡವಾಳಗಿತ್ತಿ ಹುಡುಗಿಯಿದ್ದಳಂತೆ ಮದುವೆಯಾದ ಸುದ್ದಿ ತಿಳಿಸಿ ಮಾತಾಡಲೂ ಪುರುಸೊತ್ತಿಲ್ಲದಂತೆ, ಕಾರಿನಲ್ಲಿ ಬರ್ರಂತ ಹೊರಟು ಹೋದೆಯಂತೆ. ಆದಕ್ಕಾಗಿ 'ಕ್ರಾಂತಿ' ನಿನ್ನನ್ನು ಪ್ರಿಯ ಬೋಳಿಮಗನೇ ಅಂತ ಸಂಭೋದಿಸಿದ್ದು.

ಈ ಪ್ರಿಯ ಬೋಳಿ ಮಗನೇ ಎನ್ನುವ ಮಾಣಿಕ್ಯದ ದೀಪ್ತಿಯನ್ನು ಕಲಿಸಿಕೊಟ್ಟವನೂ ನೀನೇ ಎಂಬುದು ನಿನಗೆ ಚೆನ್ನಾಗಿ ಜ್ಞಾಪಕ ಇರಬೇಕಲ್ಲಾ ? ಆವತ್ತು ನೀನು ಚಿತ್ತಾಲರ 'ಶಿಕಾರಿ' ಕಾದಂಬರಿ ಓದಿ ಅವರಲ್ಲಿಯ ಈ 'ಬೋಳಿಮಗನೇ' ಅನ್ನೋದರ ಬಳಕೆಯ ವೈಶಿಷ್ಟ್ಯವನ್ನು, ಹನೇಹಳ್ಳಿಯ ಸಾಂತಯ್ಯ ಬಾಪ್ಪಾನ ಮಗ ನಾಗಪ್ಪನ ವಿಶಿಷ್ಟ ವಿಲಕ್ಷಣ ವ್ಯಕ್ತಿತ್ವದ ಬಗ್ಗೆ ಸವಿವರವಾಗಿ ತಿಳಿಸಿ ನನಗೂ ಆ ಕಾದಂಬರಿ ಓದುವಂತೆ ಪ್ರೇರೇಪಿಸಿದ್ದು ನೀನು ತಾನೆ ? ನೀನು ಮದುವೆಯಾಗಿದ್ದಕ್ಕೆ ನನ್ನ ಆಕ್ಷೇಪಣೆ ಇಲ್ಲೊ ಕ್ರಾಂತಿ, ಕೌಪಿನ ಕಟ್ಟಿ ಕಾವಿ ಹಾಕಿ ಕೈಯಲ್ಲಿ ದಂಡ ಕಮಂಡಲ ಹಿಡಿದು ಹಿಮಾಲಯಕ್ಕೆ ಹೋಗಬೇಕಿತ್ತು ಅಂತ ನನ್ನ ಆಪೇಕ್ಷೆಯುಲ್ಲ, ಆ ಯಾವಳೊ ಹಾಳಾದ ಬಂಡವಾಳಗಿತ್ತಿ ಹೊಲಸು ರಂಡೆಯನ್ನ ಕಟ್ಟಿಕೊಳ್ಳುವದಕ್ಕಿಂತ, ಹಳದಿ ಮಿಶ್ರಿತ ಕೆಂಪು ಬಣ್ಣದ ಗಾಯತ್ರಿಯನ್ನೋ ಮೈತ್ರೇಯಿಯನ್ನೋ ಮದುವೆಯಾಗಿ ಹಾಳಾಗಿದ್ದರೆ ಒಂದಿಷ್ಟು ಸಂತೋಷ ಪಡಲು ಖಂಡಿತಾ ಪ್ರಯತ್ನಿಸುತ್ತಿದ್ದೆ.

ಎಂಬತ್ತರ ದಶಕದಿ ಶಹಾಬಾದ ವಾಡಿ ಕಂಪನಿಗಳಲ್ಲಿ ಕಾರ್ಮಿಕರನ್ನ ಸಂಘಟಿಸಿ ಚಳುವಳಿಯ ಮುಂಚೂಣಿಯಲ್ಲಿದ್ದು ಕರ್ನಾಟಕಕ್ಕೆ ಮಾದರಿಯಾಗುವಂತಹ ನಾಯಕತ್ವ ಕೊಟ್ಟು ಇದ್ದಕ್ಕಿದ್ದಂತೆ ಒಂದು ದಿನ ಬೆಳಿಗ್ಗೆ ಕಾಫಿ ಮಧ್ಯಾಹ್ನದ ಊಟಕ್ಕೂ ಗತಿಯಿಲ್ಲದೇ ಬ್ರೇನ್ ಟ್ಯೂಮರಿನಿಂದಾಗಿ ಸತ್ತ ನಿಮ್ಮ ಅಪ್ಪಾಜಿ ಶ್ರೀನಿವಾಸರವರ ಏಕೈಕ ಸುಪುತ್ರ ನೀನೇ ಏನೋ ? ನಾನು ಛಾಟಿ ಚಪ್ಪಲಿ ಹಾಕಿದಾಗ, ಮುಖಕ್ಕೆ ಪೌಡರ್ ಬಳಿದು ಕೊಂಡಾಗ ಮಾತು ಮಾತಿಗೆ ಪೆಟ್ಟಿ ಬೂರ್ಜ್ವಾ ಸಂಸ್ಕೃತಿ ಅಂತ ಗೇಲಿ ತಮಾಷೆ ಕಟಕಿಯಿಂದ ವ್ಯಂಗವಾಡಿ ವಿವರವಾದ ವ್ಯಾಖ್ಯಾನ ಕೊಡುತ್ತಿದ್ದ ಕಾಮ್ರೇಡ್ ಕ್ರಾಂತಿ ಕುಮಾರ ಯಾವಳೋ ಬಂಡವಾಳಗಿತ್ತಿ ಮದುವೆಯಾಗಿ ಕಾರು ಬಾರಿನಲ್ಲಿ ತಿರುಗಾಡುವ ವಿಷಯ ಗೊತ್ತಾದಾಗ ನನ್ನ ಮನಸ್ಥಿತಿ ಹೇಗಿದ್ದಿರಬೇಕು ನೀನೆ ಊಹಿಸಿನೋಡು.

ಹಾಂ...ಕ್ಷಮಿಸು ಕ್ರಾಂತಿ, ನಿನ್ನ ಮೇಲಿನ ಪ್ರೀತಿ, ವಿಶ್ವಾಸ ಗೌರವಗಳಿಂದಾಗಿ ನಾನು ಇಷ್ಟೆಲ್ಲಾ ಬೈಯ್ಯಲು ಸಾಧ್ಯವಾಯಿತು.

ನಾನು ಈ ಪತ್ರವನ್ನು ಶಾಹಾಬಾದಿನ ವಲ್ಲಭಾಯಿ ಪಟೇಲ ಚೌಕಿನ "ಪಾಟೀಲ ಬಿಲ್ಡಿಂಗ" ಎರಡನೆಯ ಮಹಡಿಯ ಮೂಲೆಯಲ್ಲಿರುವ ನಮ್ಮ ಚಿಕ್ಕ ಪಾರ್ಟಿ ಆಫೀಸಿನಿಂದ ಬರೆಯುತ್ತಿದ್ದೇನೆ. ಅದೇ ನೀನು ಇಷ್ಟ ಪಡುವ ಕಿಡಕಿಯಿಂದಲೇ ಪ್ರಪಂಚವನ್ನು ನೋಡುತ್ತಾ ಹಾಳೆಯ ಮೇಲೆ ಅಕ್ಷರಗಳನ್ನು ಮೂಡಿಸುತ್ತಿದ್ದೇನೆ. ಈಗ ನಾನು ಪ್ರತಿ ರವಿವಾರ ಪ್ರೀತಿಯ ಉತ್ತಪ್ಪ, ಯಾ, ದೊಸೆಗಾಗಿ ಕಿಡಕಿಯ ಕಡೆಗೆ ನೋಡುವದನ್ನೇ ಬಿಟ್ಟಿದ್ದೇನೆ. ಯಾಕೆ ಗೊತ್ತಾ ? ಹಾಂ ತಡೆ ಹೇಳ್ತೀನಿ ಆದರೆ ನಿನಗೀಗ ಈ ಸುದ್ದಿಯಿಂದ ದುಃಖವಾಗಬಹುದೇ ? ಎಂಬ ಯಕ್ಷ ಪ್ರಶ್ನೆ ನನ್ನೆದುರಿಗಿದೆ. ನಿನ್ನನ್ನು ದುಃಖ ಪಡಿಸಬೇಕೆನ್ನುವ ಯಾವ ಇರಾದೆಯೂ ನನಗಿಲ್ಲ. ವಿಷಯ ಗೊತ್ತಾದ ಮೇಲೂ ಸಂತೋಷ ಪಡುವಷ್ಟು ಸಿನಿಕ ಕಾಮ್ರೇಡ್ ನೀನಲ್ಲ ಅಂತ ನಾನು ನಂಬಿಕೊಡಿದ್ದೇನೆ.

"ಈ ಕ್ರಾಂತಿಕನೆಸಿನಜನ ತುಂಬಾ ಸಿನಿಕರಾದಿರ್ತಾರೆ" ಅಂತ್ಹೇಳಿ ಉದ್ದೇಶ ಪೂರ್ವಕವಾದಿಯೇ ನಿನ್ನನ್ನು ರೇದಿಸಿ ಕಿಲಕಿಲನೇ ನಗುತ್ತಿದ್ದ ಆ 'ಅಲಕಾ' ಹಾಂ ಅದೇ ಕೆಳದಿನ ಮನೆ ರಾಧಾಬಾಯಿ, ಮಾವಶಿಯವರ ಕಿರಿಯ ಮಗಳು 'ಅಲಕಾ' ಸೂಸೈಡ ಮಾಡ್ಕೊಂಡು ಸತ್ತು ಬಿಟ್ಟಳು. ಈಗಾಗಲೇ ಮೂರುದಿನ ಕಳೆದು ಹೋದಿವೆ. ನಿನ್ನೆಯಿಂದಷ್ಟೇ ಅವಳ ಸಾವಿನ ಗುಂದಿನಿಂದ ಹೊರಬಂದಿದ್ದೇನೆ.

ನಿನ್ನೆಯಿಂದ ಹೊಟ್ಟೆಗೆ ಏನೂ ಬಿದ್ದಿರಲಿಲ್ಲ ಹಾಂ, ಮತ್ತೆ; ಅಲಕಾಳ ಸಾವಿನಿಂದ ಉಪವಾಸ ಮಾಡ್ತಿದ್ದೀನಿ ಅಂದ್ಕೋಬೇಡ ಕನಿಷ್ಠ ಕಣ್ಣೀರಾದರೂ ಸುರಿಸಬೇಕಾದ ನೀನೆ ಯಾವುದೋ ಬಾರಿನಲ್ಲಿ ಕೂತು ಆ ಬಂಡವಾಳಗಿತ್ತಿಯ ಕಣ್ಣಲ್ಲಿ ಕಣ್ಣಿಟ್ಟು ಕೈಯಲ್ಲಿ ಕೈ ಹಿಡಿದು ಹಾಟೋ ಕೂಲ್ಡೋ ಹಾಕ್ತಿರಬೇಕಾದರೆ... ಹಾಂ, ಉಪವಾಸ ಅಂತ ಹೇಳಿದ ನಲ್ಲಾ ಹೌದು ಮೂರು ತಿಂಗಳಿನಿಂದ ರೂಮು ಬಾಡಿಗೇನೂ ಕೊಟ್ಟಿಲ್ಲ. ಇತ್ತೀಚಿಗೆ ಯಾರ ಹತ್ತಿರಾನೂ ಹಣ ಕೇಳಲಿಕ್ಕೆ ನನಗೆ ನಾಚಿಕೆಯೆನಿಸುತ್ತಿದೆ. ಮೊದಲಿನ ಹಾಗೆ ಜನರಲ್ಲಿ ನಮ್ಮ ಪಾರ್ಟಿಯ ಬಗ್ಗೆ ಗೌರವ ಭಾವನೆ ಉಳಿದಿಲ್ಲ. ಹೋದ ವರ್ಷ ಶಾಹಾಬಾದಿನ ಸಿಮೆಂಟ ಕಂಪನಿ ಲಾಕ್ಔಟ ಆದಾಗ ನಮ್ಮ ಪಾರ್ಟಿಯ ಎಂ. ಎಲ್. ಎ. ಪಶುಪತಿ ತಲೆಮರೆಸಿಕೊಂಡು ಬೆಂಗಳೂರಿಗೆ ಹೋದ ಇರಲಿ ಬಿಡು ಇವೆಲ್ಲಾ ಮಾಮೂಲಿ ವಿಷಯ ತಾನೆ ?

ಕ್ರಾಂತಿ ನಿನಗೆ ಆ ಬದುಕು ಹಿಂಸೆ ಅನಿಸ್ತಾ ಇಲ್ಲವಾ ? ಹೊಟ್ಟೆ ಕಿಚ್ಚಿನಿಂದಾಗಿ ನಿನಗೆ ಈ ಮಾತು ಕೇಳುತ್ತಿದ್ದೇನೆ. ಎಂದು ಖಂಡಿತ ತಪ್ಪು ಭಾವಿಸಬೇಡ. ವಯಸ್ಸು

ನಲ್ಲಿ ನಿನಗಿಂತಲೂ ಚಿಕ್ಕವ ನನ್ನೊಳಗೆ ಬದುಕಿನ ಬಗ್ಗೆ ಭ್ರಮೆಗಳು ತುಂಬಿಕೊಂಡಿರಲೂ ಬಹುದು. ಆದರೆ ನಿನ್ನ ಅಪ್ಪಾಜಿಯವರ ಒಟ್ಟು ಬದುಕಿನ ಸಾರ್ಥಕತೆಯನ್ನು ಹೇಗಾದರು ಅಲ್ಲಗಳೆಯಲಾಗುತ್ತದೆ? ನಾವು ಶ್ರಮಿಸಿದ ಹಾದಿಗಿಂತಲೂ ಕಟ್ಟಿದ ಕನಸುಗಳೇ ಭಾರವಾದುವಲ್ಲ, ನಿನ್ನೊಳಗೆ ಇಂತಹ ನಿರ್ಧಾರ ಗುಪ್ತಗಾಮಿನಿಯಾಗಿ ಒಳ ವಿದ್ಯುತ್ತಿನಂತೆ ಹರಿಯುತ್ತಿದ್ದರೆ. ಆ ನಿರ್ಧಾರ ಈ ಮೊದಲೇ ಸ್ಫೋಟಗೊಂಡಿದ್ದರೆ. ನಿಮ್ಮವ್ವ ಗೋಳು ಹೋಯ್ದುಕೊಳ್ಳುತ್ತಾ ಕೊರಗಿನಿಂದ ಸಾಯುತ್ತಿರಲಿಲ್ಲ. ನೀನೀಗ ಆ ಬಂಡ ವಾಳಗಿತ್ತಿಯವಳ ಗುಲಾಮನಾಗಿ ಬದುಕುವಷ್ಟರ ಮಟ್ಟಿಗೆ ಕೀಳಾಗುತ್ತಿರಲಿಲ್ಲ.

ಭಾಸಿಂಗ ಕಟ್ಟಿಸಿಕೊಂಡು "ಉತ್ತಿಷ್ಠೋಭವ"......ಎಂಬ ಉಗುಳು ಮಂತ್ರದ ಜೊತೆಗೆ ಅಗ್ನಿಕುಂಡದ ಐದು ಸುತ್ತಬಂದು ಮೂರೆಳೆಯ ಜನಿವಾರ ಕಿತ್ತಿ, ಆರೆಳೆಯ ಜನಿವಾರ ಧರಿಸಿ ಕುರಿಮರಿಯಂತವಳನ್ನ ವರಿಸಿ ಗಂಡನಾಗಿ, ಅಪ್ಪನಾದಿ, ಮೋಕ್ಷದ ಹಾದಿಯೆಡೆಗೆ ಸಾಗುತ್ತಿದ್ದೆ. ಕಾಶ್ಯಪ್ಯದ ಕರಿನೆರಳಲ್ಲೇ ಕೂತು ಪ್ರಪಂಚವನ್ನು ವ್ಯಾಖ್ಯಾನಿಸುತ್ತಿದ್ದೆ.

ನಿಮ್ಮ ಅಪ್ಪಾಜಿ ಸ್ವಾತಂತ್ರ್ಯ ಹೋರಾಟದ ಸ್ಫೂರ್ತಿಯಿಂದ ಕ್ರಾಂತಿಕಾರಿಯಾಗಿ ಸಿಡಿದವರು. ಗಾಂಧೀವಾದವನ್ನ ಸಾರಸಗಟಾಗಿ ಅಲ್ಲಗಳೆಯುತ್ತಲೇ ಗಾಂಧೀಜಿಯವರನ್ನ ಯಾಕೆ ಪ್ರೀತಿಸುತ್ತಿದ್ದರು, ಅನ್ನೋದು ಆಗ ನಮಗ್ಯಾರಿಗೂ ಗೊತ್ತಾಗಲೇ ಇಲ್ಲ.

ಗಾಂಧೀಯ ಮನಸ್ಸು ಮಾರ್ಕ್ಸ್‌ನ ವಿಚಾರದ ನಿಮ್ಮ ಅಪ್ಪಾಜಿಯಂತವರು ಮಾತ್ರ ಕೊನೆಯವರೆಗೂ ತತ್ವಕ್ಕೆ ಆದರ್ಶಕ್ಕೆ ಬದ್ಧರಾಗಿ ಉಳಿಯಲಿಕ್ಕೆ ಸಾಧ್ಯವಾಗುತ್ತದೆಯೋ ಏನೋ? ಲೋ ಕ್ರಾಂತಿ ನಮ್ಮ ವ್ಯಕ್ತಿತ್ವದ ಬಗ್ಗೆ ನನಗೊಂದು ಗುಮಾನಿಯಿದೆ. ಭದ್ರಬುನಾದಿಯಂತಹ ಮನಸ್ಥಿತಿ ಹೊಂದದ ನಮ್ಮಂತವರು ಹುಸಿಕ್ರಾಂತಿಕಾರಿಗಳ ಸಾಲಿನಲ್ಲಿ ನಿಲ್ಲಲುಲಾಯಕ್ಕಾದವರು" ಅಂತ.

ಈ ಮೇಲಿನ ಮಾತಿಗೆ ನಾನೂ ಹೊರತಲ್ಲ, ಯಾಕೆಂದರೆ; ಹೋದ ವರ್ಷ ನನ್ನ ಜೀವನದಲ್ಲಿ ಒಂದು ಮರೆಯಲಾಗದ ಘಟನೆ ನಡೆಯಿತು. ನಿನ್ನ ಸಾಮಿಪ್ಯ ಕಳೆದು ಕೊಂಡ ನನಗೆ ಈ ಮದುವೆಯಾಗಬೇಕೆಂಬ ಹುಚ್ಚು ಎಲ್ಲಿಂದ ಬಂತೋ ಗೊತ್ತಿಲ್ಲ ಶಾಹಾಬಾದ ಶರಣಬಸಪ್ಪನ ಗುಡಿಗೆ ಬಂದು ಹೋಗುವ ಹುಡುಗಿಯರ ಕಣ್ಣುಗಳಲೆಲ್ಲ ಪ್ರೀತಿ ಹುಡುಕುತ್ತಿದ್ದೆ. ಕೊನೆಗೊಬ್ಬಳು ಕಿಸಕ್ಕಂತ ನಕ್ಕಿದ್ದೇ ನನ್ನ ಸೌಭಾಗ್ಯ ಅಂತ ತಿಳಿದು ಕೊಂಡು "ನಾನು ಬಡವಿ ಆತ ಬಡವ" ಒಲವೆ ನಮ್ಮ ಬದುಕು ಅಂತ ಅಜ್ಜ ಬೇಂದ್ರೆಯವರ ಸಾಲು ಗುನುಗುನುಸಿ ಅವಳ ಬಡತನದ ಕಹಿ ಅನುಭವಗಳೆಲ್ಲ ಹರಳು ಗಟ್ಟಿ

ಪ್ರೀತಿಯಾಗಿ ನನ್ನ ಬದುಕೇ ಬಂಗಾರವಾಯಿತೆಂದು ಭ್ರಮಿಸಿ, ಮದುವೆಯಾಗುವ ಒಂದು ಕಟ್ಟ ನಿರ್ಧಾರ ತೆಗೆದುಕೊಂಡಿದ್ದು, ಆ ಹುಡುಗಿಯನ್ನು ಪ್ರೀತಿಸಿದ್ದು ನನ್ನ ಪಾಲಿಗೆ ಕ್ರಾಂತಿ ಮಾಡಿದಷ್ಟೇ ಸಂತೋಷಕೊಟ್ಟಿತ್ತು. ಆದರೆ ಅವಳಿಗೆ ನೌಕರಿ ಬಂದು ಬಡತನ ಹೋಗಿ ಸಿರಿತನದಲ್ಲಿ ಸಿಂಗಾರಗೊಂಡ ಆ ನನ್ನ ಬಡವಿ ಪಡೆದುಕೊಂಡಿದ್ದು, ಮದುವೆಯಾದದ್ದು ಬೇರೆ ಯಾರನ್ನೋ ನೋಡು ಕ್ರಾಂತಿ ಈ ಹುಡುಗಿಯರ ಬಗ್ಗೆ ಪೂರ್ವಾಗ್ರಹ ಪೀಡಿತನಾಗಿ ನಿನ್ನ ಬಂಡವಾಳಗಿತ್ತಿ ಮಡದಿಯನ್ನ ಬೈದೆ ಅಂತ ಸಿಟ್ಟಾಗ್ಬೇಡ, ಈ ಹುಡುಗಿಯರೇ ಹೀಗೆ ಎನ್ನುವ ಒಟ್ಟು ತೀರ್ಮಾನವೂ ನನ್ನದಲ್ಲ ಅಂದ ಹಾಗೆ ತುಂಬಾ ದಿನಗಳಿಂದ ನನಗೊಂದು ಪ್ರಶ್ನೆ ಕಾಡ್ತಾ ಇದೆ. ನಿನ್ನ ಮಡದಿಯ ಮೈಯಲ್ಲಿ ಬಂಡವಾಳ ಶಾಹಿಯ ರಕ್ತ ಹರಿದಾಡುತ್ತಿದೆಯೆಂದು ನನ್ನ ಬೈಗುಳಕ್ಕೆ ಸಮರ್ಥನೆ ಕೊಟ್ಟು ಕೊಂಡರೂ,

ಈ ನನ್ನ ಬಡವಿಯ ಮೈಯಲ್ಲಿ ಅವಕಾಶವಾದಿ ರಕ್ತ ಹರಿಯುತ್ತಿತ್ತೆ ? ಅದೆಲ್ಲಾ ಯಾಕೀಗ ನಿನ್ನನ್ನು ಒಮ್ಮೆ ನೋಡಿ ಬಹಳ ಮಾತಾಡಬೇಕೆಂದಿದ್ದೆನೆ. ನಿನ್ನ ಪ್ರಿಯ ಮಡದಿಗೆ ಬೈದಿದ್ದಕ್ಕೆ ಕ್ಷಮೆ ಇರಲಿ, ಅರೆ, ಕೆಳಗೆ ರಾಧಾಬಾಯಿ ಮಾವಶಿಯವರ ಮನೆಯಲ್ಲಿ ಜೋರಾಗಿ ಅಳುವ ಧ್ವನಿ ಕೇಳಿ ಬರುತ್ತಿದೆ. ಅಲಕಾ ಸತ್ತ ಸುದ್ದಿಗೊತ್ತಾದಿ ಯಾರೋ ನೆಂಟರು ಬಂದಿರಬಹುದು. ಇರಲಿ ಬಿಡು, ಇದು ದಿನಾ ಇದ್ದಿದ್ದೇ ಮಹಾರಾಯಿತಿ ಯಾಕಾದರೂ ಸತ್ತಳೋ ? ಮದುವೆಯಾದ ಮೇಲೆ ಸೀಮೆ ಎಣ್ಣೆ ಸುರಿದುಕೊಂಡೋ ಇಲ್ಲಾ ನೇಣು ಹಾಕಿಕೊಂಡೋ ಸತ್ತಿದ್ದಳು ಅಂದ್ರೆ ವರದಕ್ಷಿಣೆಯ ಕಾಟ, ಗಂಡ, ಅತ್ತೆ, ಮಾವರ ಕಿರುಕುಳ ಅಂತ ಇತ್ಯಾದಿಯಾಗಿ ಕಾರಣ ಹುಡುಕಿ 'ವುಯ ವಾಂಟ ಜಸ್ಟಿಸ್, ಧನ ಪಿಶಾಚಿಗಳಿಗೆ ದಿಕ್ಕಾರ !, ಲಾಲ್‌ಬೋಟಾ ಜಿಂದಾಬಾದ' ಎಂದು ಒಂದು ನಾಲ್ಕು ದಿನದ ಮಟ್ಟಿಗೆ ಬೀದಿ ಮೆರವಣಿಗೆಯಾದರೂ ಮಾಡಲಿಕ್ಕೆ ಅನುಕೂಲವಾಗುತ್ತಿತ್ತು. ಕೊನೆಯದಾಗಿ ಒಂದು ಸಣ್ಣ ಪ್ರಶ್ನೆಯೊಡನೆ ಪತ್ರ ಮುಗಿಸುತ್ತೇನೆ.

ನಿನ್ನ ಪ್ರೀತಿಯ ಬಂಡವಾಳಗಿತ್ತಿ ಮಡದಿಗೆ, ನನ್ನ ಪ್ರೀತಿಯ ಉತ್ತಪ್ಪ, ಯಾ, ದೋಸೆ ಮಾಡಲಿಕ್ಕೆ ಬರುತ್ತದೆಯೇ ? ಪತ್ರ ಬರೆ,

ಇಂತಿ, ನಿನ್ನ ಗೆಳೆಯ.

ಗುರುಬಸಯ್ಯ

## ಸ್ಥಾನ–ಮಾನ

ಅವನಿಗಿಲ್ಲ
ಎಳ್ಳಷ್ಟೂ ಸಾಹಿತ್ಯಿಕ ಜ್ಞಾನ
ಮತ್ತೆ ಸಾಮಾಜಿಕ
ಮಾನ–ಪಾನ,
ಆದರೂ
ಮೊನ್ನೆ ಬಂತಂತೆ ನೋಡಿ
ಅವನಿಗೆ
ಶರಣ ಸ್ಥಾನ-ಮಾನ

○

ಬಣ್ಣಗೊಡ್ರಿ

## ಧರ್ಮ

ಧರ್ಮಕ್ಕಾಗಿ ಅತ್ತರು
ಪ್ರಾಣ ತೆತ್ತರು
ದೇವರಿಗಾಗಿ
ಸತ್ತರು
ಹರಿಸಿದರು
ತಮ್ಮ ನೆತ್ತರು
ರಾಜರುಗಳುರುಳಿಸಿದರು
ಆಳುವವರನ್ನಿಳಿಸಿದರು
ಧರ್ಮಕ್ಕಾಗಿ ಜೀವ
ಕೊಡಬಲ್ಲರು
ಆಚರಣೆಗೆ ಮಾತ್ರ
ಒಲ್ಲರು

# ಹನಿಗವನಗಳು

## ಶೂನ್ಯ ಸಂಪಾದನೆ

ಶೂನ್ಯ ಸಂಪಾದನೆ
ಮಾಡಿದರು
ಶರಣರು
ಯೋಜನೆಯು
ಲಕ್ಷ-ಲಕ್ಷ ಮೊತ್ತದ
ಒಂದೊಂದೇ ಶೂನ್ಯ
ಸಂಪಾದನೆ ಮಾಡುತಿದ್ದೇವೆ
ನಾವೂನು

## ಸ್ವರ್ಗವಾಸಿ

ನೀ ಬಂದ ಮೇಲೆ
ಸುಳ್ಳಲ್ಲ ಸಖಿ,
ಮನೆಯನ್ನು ಸ್ವರ್ಗ ಮಾಡಿರುವೆ
ನಾನೀಗ ಯಾರು
ಗೊತ್ತೆ ?
ಸ್ವರ್ಗವಾಸಿಯಾಗಿರುವೆ,

●

# "ತುಂಬಿದ ಬಸುರಿ ತಲಿಮ್ಯಾಲ ಕೊಡಹೊತ್ತು ನಡದ್ಹಾಂಗ ನಮ್ಮ ಪಯಣ"

## ಸಿದ್ಧರಾಮ ಹೊನ್ಕಲ್

ಹೈದ್ರಾಬಾದ ಕರ್ನಾಟಕದ ನೆಲ ಅಂದ್ರ ಸಾಕು; ಬಿಸಿಲು ಹಾಗು ಒರಟುತನಕ್ಕೆ ಇನ್ನೊಂದು ಹೆಸರು ಅಂದುಕೊಳ್ಳುವ ಜನರಿಗೇನು ಕೊರತೆ ಇಲ್ಲ ಈ ವಿಶಾಲ ಕರ್ನಾಟಕದ ನೆಲದಲ್ಲಿ (ಕನ್ನಡ ನೆಲದಲ್ಲಿ ಅನ್ನುವ ಧೈರ್ಯ ಇಲ್ಲ!) ಇಲ್ಲಿಯ ಬಿಸಿಲೇನೋ ತುಂಬಾ ಪ್ರಖರ ನಿಜ. ಆದರೆ ಬೇರೆಯವರು ಭಾವಿಸಿದಷ್ಟು ಮಾತ್ರ ಒರಟರಲ್ಲ ಇಲ್ಲಿಯ ಜನ. (ನಾನು ಇದೇ ಪ್ರದೇಶದವನಾದ್ದರಿಂದ ಹೀಗೆ ಹೇಳಿಕೊಳ್ಳಬೇಕಾದ ಹೊಣೆ ಸ್ವಲ್ಪ ಇದೆಯನ್ನಿ) ಅಂತಹ ಬಿಸಿಲು ಹಾಗು ಜನರ ಮಧ್ಯೆ ತುಂಬಿರುವ ಬೇಸಿಗೆ ಕಾಲದ ಒಂದು ಮಧ್ಯಾಹ್ನದ ಬಸ್ಸಿನಲ್ಲಿಯ ಪ್ರಯಾಣವೇ ಈ ಬರಹದ ಮೂಲವಸ್ತು. ಮೈಸೂರ ಕಡೆಯ ಮೃದು ವ್ಯಕ್ತಿತ್ವದ ಮಧ್ಯ ವಯಸ್ಕರೊಬ್ಬರು ಈ ಪ್ರಯಾಣದಲ್ಲಿ ಭಾಗಿಯಾಗಿದ್ದರು,

ಕಾದ ಹಂಚಿನಂತಹ ಸುಡು ಸುಡು ಬಿಸಿಲು ಅಂತಹ ಬಿಸಿಲಿನಲ್ಲೂ ಬಸ್ಸಿನ ಟಾಪು ಮೇಲೆ ಹತ್ತಿ ಕುಳಿತಿರುವ ಜನ ! ಒಳಗಂತು ಒಬ್ಬರ ಪಾದ ಇನ್ನೊಬ್ಬರ ಪಾದದ ಮೇಲೆ. ಹಾಗಾಗಿ...ಜಗಳ. ಬಸ್ಸು ನಿಮ್ಮಪ್ಪನದೆ ? ನಾವು ಪುಕ್ಕಟೆ ಹೋಗ್ತಾ ಇದ್ದಿವಾ ? ಸೀಟು ಸಿಕ್ಕದ ಸುಮ್ನೆ ಕುಂದ್ರಬಾರದಾ ? ಅಷ್ಟೊಂದು ದೊಡ್ಡಸ್ತನಿಕೆ ಇದ್ದವನು ಕಾರಿನಲ್ಲಿ ಹೋಗ್ಬೇಕಿತ್ತು. ಇವನದೊಂದು ದೊಡ್ಡ ಕಿರಿಕಿರಿ...ಇತ್ಯಾದಿಗಳ ಜೊತೆ ನೋಡಬಿಡ್ತೀನಿ ಎಂದು ಮಾತಿಗೆ ಮಾತು ಬೆಳೆದು ಕೈಗೆಕೈ ಮಿಲಾಯಿಸಲು ಮುಂದಾಗುವ ಸಹ ಪ್ರಯಾಣಿಕರು.

ಈ ಭಾಗಕ್ಕೆ ತೀರ ಹೊಸದಾಗಿ ಹೊರಟಂತಿದ್ದ ಆ ಮೈಸೂರಿನ ಕಡೆಯ ವ್ಯಕ್ತಿಯು ಮೂರು ಜನ ಕುಳಿತುಕೊಳ್ಳುವ ಸೀಟಿನಲ್ಲಿ ಕಿಟಕಿಯ ಪಕ್ಕದ ಸೀಟಿನಲ್ಲಿ ಕುಳಿತಿದ್ದರು ಸಹ ಆಗಾಗ ಬೆವೆತ ಮುಖ ಕೈ ಕೊರಳು ಒರೆಸಿಕೊಳ್ತಾ ಇದ್ದರು. ಅವರ ಪಕ್ಕದ ಮಧ್ಯದ ಸೀಟಿನಲ್ಲಿ ತೀರ ಒತ್ತಿಕೊಂಡೇ ಕುಳಿತಿದ್ದ ದೈತ್ಯ ಆಕಾರದ ಅಜಾನುಬಾಹು ಒಬ್ಬ. ಆತನ ದೇಹ ಉದ್ದ ಕೂದಲು ಬಟ್ಟೆಗಳಿಂದ ಹೊರಟ

ಬೆವರು ಒಂದು ವಿಚಿತ್ರ ವಾಸನೆಯನ್ನು ಹುಟ್ಟಿಸುತ್ತಿತ್ತು. ಆತನ ಪಕ್ಕದಲ್ಲಿ ಅಂದ ಅಬೇ ಸೀಟಿನ ಕೊನೆಯ ಸ್ಥಳದಲ್ಲಿ ನಾನು ಕುಳಿತಿದ್ದೆ. (ಇಲ್ಲಿ ನಾನು ಅನ್ನುವದ ಕೇವಲ 'ನಿರೂಪಕ' ಎಂದು ತಿಳಿದುಕೊಳ್ಳಬೇಕು) ತೀರ ದೈತ್ಯವು ಅಲ್ಲದ ಅಷ್ಟೇನ ತೆಳುವು ಅಲ್ಲದ ಸ್ವಲ್ಪ ಸ್ಥೂಲವೇ ಅನ್ನಬಹುದಾದ ನನ್ನಿಂದ ಹಾಗು ಮಧ್ಯದ ದೈತ್ಯ ಆಕ್ರಮಣದಿಂದ ಶೋಷಣೆಗೆ ಒಳಗಾದವರಂತೆ ಆ ಮೃದು ವ್ಯಕ್ತಿ ಕಿಟಕಿಗೆ ಸಾಕಷ್ಟು ಒತ್ತಿಕೊಂಡೇ ಕುಳಿತು ಚಡಪಡಿಸುತ್ತಾ ಇದ್ದರು. ಅರವತ್ತು ಜನ ಆರಾಮವಾಗಿ ಅನ ದಿದ್ದರು ಚುವಾಗಿ ಕುಂತು ಹೋಗಬಹುದಾದ ಆ ಬಸ್ಸಿನಲ್ಲಿ ನೂರಕ್ಕೂ ಮಿಕ್ಕಿ ಜನ ತುಂಬಿಕೊಂಡಿದ್ದರು. ಇದಲ್ಲದೆ ಟಾಪ ಮೇಲೆ ಕುಳಿತ ಜನರೆಷ್ಟು ಎಂದು ತಿಳಿದುಕೊಳ ಬೇಕಾದರೆ ಬಸ್ಸು ತಲುಪಬೇಕಾದ ಸ್ಥಳ ತಲುಪಿಯಾದ ಮೇಲೆ ಉಳಿದವರೆಷ್ಟು ಎಂದು ಲೆಕ್ಕ ಮಾಡಿಯೇ ಹೇಳಬೇಕಾದ ಸನ್ನಿವೇಶವಿತ್ತು.

ಈ ಎಲ್ಲಾ ಪರಿಸ್ಥಿತಿ ಕಂಡು ದಿಗ್ಭ್ರಮೆಗೊಂಡುತಿದ್ದ ಆ ವ್ಯಕ್ತಿ ಯಾರೊಂದಿ ಗಾದರು ಮಾತಾಡಿ ತಮ್ಮ ಆಲೋಚನೆಗಳನ್ನು ಹಂಚಿಕೊಳ್ಳಲು ಕಾತುರರಾಗಿದ್ದರು ಅನ್ನುವದನ್ನು ಅವರ ಕಡೆ ದಿಟ್ಟಿಸಿದಾಗಲೆಲ್ಲಾ ಸ್ನೇಹದ ನಗೆ ತುಳುಕಿಸುವ ಅವರ ಕಣ್ಣುಗಳಿಂದಲೇ ಅರ್ಥವಾಗುತ್ತಿತ್ತು. ಆದರೆ ಅವರು ಏನು ಕೇಳುತ್ತಾರೆ. ಅದಕ್ಕೆ ಏನು ಉತ್ತರ ಹೇಳಬಲ್ಲೆ ಎಂಬ ಪಶ್ನೋತ್ತರಗಳೆಲ್ಲಾ ಗೊತ್ತಿರುವದರಿಂದ ಮಾತ ನಾಡುವದೇಕೆಂದು ಸುಮ್ಮನಾಗಿದ್ದೆ. ಅವರು "ಏನ್ರಿ, ನಿಮ್ಮ ಕಡೆ ಜನಗಳು ಇದೇ ರೀತಿ ಯಾವಾಗ್ಲೂ ಪ್ರಯಾಣಿಸ್ತಾರಾ ? ಎಂದು ಕೇಳಬಹುದಾಗಿತ್ತು, ಅದಕ್ಕೆ ನಾನು. "ಇಲ್ಲಿಯ ಜನರಿಗೆ (ನನ್ನನೊಳಗೊಂಡೇ) ಇದೆಲ್ಲಾ ತೀರ ಸಹಜ. ಇದಕ್ಕೆ ಸಾರಿಗೆ ಅವ್ಯವಸ್ಥೆ ಎಷ್ಟು ಕಾರಣವೋ ಅಷ್ಟೇ ಈ ಭಾಗದ ಬೇಜಾವಬ್ದಾರಿ ನಾಯಕರು ಹಾಗು ಸಿನಿಕರಾದ ಜನ ಕಾರಣ ಎಂಬ ಉತ್ತರ ಹೇಳಬಹುದಾಗಿತ್ತು. ಹಾಗಾಗಿ ವ್ರಥಾ ಮಾತನಾಡಿ–ಚರ್ಚಿಸಿ ಇಳಿಯಬೇಕಾದ ಸ್ಥಳ ಬಂದಾಗ ಇಳಿದು ಹೋಗುವ ಮೂಲಕ ಎಲ್ಲವನ್ನು ಮರೆಯುವ ನಾವು ಸುಮ್ನೆ ಯಾಕೆ ಚರ್ಚಿಸಬೇಕು ಅನ್ನುವದು ಇತ್ತೀಚಿನ ನನ್ನ ಅನುಭವ ಕಲಸಿದ ಪಾಠವಾಗಿತ್ತು. ಹಾಗೂ ಚಡಪಡಿಸುತ್ತಲಿದ್ದ ಅವ ರನ್ನು ಮಾತಿಗೆಳೆಯದೇ ಸುಮ್ಮನೆ ಆಗಾಗ ಅವರ ಕಡೆ ಓರೆಯಾಗಿ ದಿಟ್ಟಿಸುತ್ತ ಕುಳಿತಿದ್ದೆ.

ಸುಡು ಸುಡು ಬಿಸಿಲು ತಂದ ಸೆಖೆ ಒತ್ತಿಕೊಂಡೇ ಕುಳಿತಿದ್ದ ನಿಂತಿದ್ದ ಜನರ ವಾಸನೆ ಬೆಚ್ಚನೇ ತೂರಿಬರುವ ಹವೆ. ಬಸ್ಸಿನೊಳಗಿನ ಜನರ ಕಚ್ಚಾಟ ಗಳು ಜಗಳಗಳು ಅಳುವ ಮಕ್ಕಳು ಗದರಿಸುವ ತಂದೆ. ಸಮಾಧಾನಿಸಿ ಜೋಗುಳ ಹಾಡಿದಂತೆ ಮಾತನಾಡುವ ತಾಯಿಯರು. ಈ ಮಧ್ಯೆ ತಾವು ರಾಜಕೀಯದ ಬಗ್ಗೆ ಪ್ರಜ್ಞೆ ಬೆಳೆಸಿಕೊಂಡಿದ್ದರಿಂದಲೇ ಇನ್ನೂ ಈ ದೇಶ ಸಂಪೂರ್ಣ ಹಾಳಾ

ಗಿಲ್ಲ ಎಂದು ಅಂದಿನ ದಿನಪತ್ರಿಕೆ ಓದಿ ರಾಜಕೀಯ ಚರ್ಚಿಸುತ್ತಿರುವ ಹಿಂದಿನ ಸೀಟಿನ ಹಲವು ಪುಢಾರಿಗಳು. ಆಗಷ್ಟೆ ವಿವಾಹವಾಗಿ ಪ್ರಯಾಣ ಹೊರಟಂತಿದ್ದ ಹಳದಿ ಟೆರಿ ಕಾಟ್ ಸೀರೆತೊಟ್ಟ ಕಪ್ಪು (ಲಕ್ಷಣವಾದ) ಚೆಲುವೆಯನ್ನು ತಲೆಗಾನಿಸಿಕೊಂಡು ತುಂಬಿದ ಬಸ್ಸಿನಲ್ಲಿ (ಕದ್ದು-ಮುಚ್ಚಿದಂತೆ ಅಂದುಕೊಂಡು) ಮೆಲ್ಲಮ್ಮ ರೋಮಾನ್ಸಗೆ ತೊಡಗಿ ರುವ ಪಡ್ಡೆಹೈದ ಜೋಡಿಯೊಂದು ಆ ಶೆಖೆಯಲ್ಲೂ ಬಸ್ಸಿನೊಳಗಿನ ಜನಕ್ಕೆ ಅನ್ನುವದ ಕಿಂತ ಆಸಕ್ತರಿಗೆಲ್ಲಾ ! ತಂಪು ನೀಡುತಿತ್ತು. ಈ ಮಧ್ಯೆ ತೂಕಡಿಸುವವರು, ಎಲೆ, ಬೀಡಿ ಜಗಿದು ಪಿಚಕ್ಕನೇ ಕಿಟಕಿಗೆ ಉಗುಳುವವರು. (ಇತರರ ಮುಖಕ್ಕು ಅಷ್ಟಿಷ್ಟು) ಇನ್ನು ಈ ದೇಶಕ್ಕೆ ಏನಾದರು ಸುಧಾರಣೆ ಆಗಬೇಕಾದರೆ. ಅದು ತಮ್ಮಿಂದಲೇ ಆಗ ಬೇಕಾಗಿದೆ. ಅದಕ್ಕಾಗಿ ಇಡೀ ದೇಶ ತಮ್ಮ ಪ್ರೌಢಾವಸ್ಥೆಗಾಗಿ ಕಾತುರದಿಂದ ಕಾಯ ಬೇಕಿದೆ. ಎನ್ನುವ ಉತ್ಸಾಹದಿಂದ ಕನಸುಗಣ್ಣಿಂದ ಕುತೂಹಲ ಹುಟ್ಟಿಸುವಂತೆ ಮಾತನಾಡುತ್ತಿರುವ ಮೂರು ಜನ ತೀರ ಹಿಂದಿನ ಸೀಟಿನ ವಿಧ್ಯಾರ್ಥಿಗಳು, ಅವರು ಬಿ. ಎ. ಬಿ. ಕಾಂ.ಗಳಲ್ಲಿ ಓದುತ್ತಿರಬಹುದು ಎನ್ನುವದು ಅವರ ಮಾತಿನಲ್ಲಿ ಇನ್ನು ಹಿಂಗದ ಉತ್ಸಾಹದಿಂದಲೇ ಅರ್ಥ ಮಾಡಿಕೊಳ್ಳಬಹುದಾಗಿತ್ತು. ಒಟ್ಟಿನಲ್ಲಿ ಭಿನ್ನ ಭಿನ್ನ ವಿಚಾರ ಹವ್ಯಾಸಗಳಿಂದ ತುಂಬಿರುವ ಬಸ್ಸಿನಲ್ಲಿ ಸೆಖೆ ಮಾತ್ರವೇ ಭಿನ್ನತೆಯೊಳ ಗಿನ ಏಕತೆಯಾಗಿತ್ತು. ಹಾಗಾಗಿ ಪ್ರತಿಯೊಬ್ಬರ ಒಮ್ಮಿಲ್ಲೊಮ್ಮೆ ಅದರ ಬಗ್ಗೆ ಚರ್ಚಿಸಿ ನಿಡುಸುಯ್ದು ತಮ್ಮ ಮುಂದಿನ ವಿಚಾರ ಸರಣಿಗೆ ಸಾಗ್ತಾಇದ್ದರು.

ಈ ಬಂಗಾರಪ್ಪ ಅಜೀಜಶೇಠ, ಹೆಗಡೆಗಳ ಜೊತೆಗೆ ನಮ್ಮ ಲಂಕೇಶರು, ತೇಜಸ್ವಿ ಚಂಪಾ-ಶೂದ್ರ ಹಾಗು ನಂಜುಂಡಸ್ವಾಮಿ ಇತ್ಯಾದಿ ಅಕ್ಷರದ ಹಾಗು ಹೋರಾಟದ ಮುಖ್ಯರನ್ನು ಒಮ್ಮೆ ಇಂತಹ ಬಸ್ಸುಗಳ ಟಾಪ ಮೇಲೆ ಕೂಡಿಸಿ ಆ ಕಡೆ ಬಳ್ಳಾರಿಯಿಂದ ಕಲಬುರ್ಗಿಗೆ ಮತ್ತು ಕಲಬುರ್ಗಿಯಿಂದ ಬಳ್ಳಾರಿಗೆ ನಾಲ್ಕಾರು ದಿನ ನಮ್ಮಗಳ ಹಾಗೆ ತಿರುಗಾಡಿಸಿದರೆ ಹೇಗಾಗಬಹುದೆಂದು ನೆನಪಿಸಿಕೊಂಡು ಒಳಗೊಳಗೆ ನಗ್ತಾ ಇದ್ದೆ, ಲಂಕೇಶ, ತೇಜಸ್ವಿ, ಚಂಪಾ, ನಂಜುಂಡಸ್ವಾಮಿಗಳೆಲ್ಲಾ ಈ ಅಧಿಕಾರದ ಮಂದಿಗೆ ಹ್ಯಾಗೆ ಉಗಿಯಬಹುದು, "ಎನ್ ಮಾರಾಯರೆ, ಈ ಕಲಬುರ್ಗಿ ಕಡೆ ಜನಗಳನ್ನ ಮನುಷ್ಯರು ಅಂತ ತಿಳ್ಕಂಡಿದ್ದಿರೇನ್ರಿ ? ಎಂದು ಕೇಳಬಹುದಾದ ತೇಜಸ್ವಿಯವರು. "ಥೂ... ಲೋಫರ್ಸಗಳಾ, ನೋಡ್ರಿ, ನಿಮ್ಮಗಳ ಆಡಳಿತದಿಂದ ಜನ ಹ್ಯಾಗೆ ಬದುಕ್ತಿದಾರೆ" ಎನ್ನುವ ಲಂಕೇಶರು. ಇನ್ನು ಚಂಪಾ. ನಂಜುಂಡಸ್ವಾಮಿಗಳಂತು ಬಸ್ಸಿನಲ್ಲಿಯು ಜನಗ ಳನ್ನೆ ಸಂಘಟಿಸಿ ಹೋರಾಟಕ್ಕೆ ತೊಡಗುತ್ತಾ ಉದುರಿಸಬಹುದಾದ ಕಿಡಿಕಿಡಿಗಳು, ಇನ್ನು ಶೂದ್ರರಂತು ಬಿ. ಟಿ. ಎಸ್. ಜೊತೆಗೆ ಕೆ. ಎಸ್. ಆರ್. ಟಿ. ಸಿ.ಯನ್ನು ತಮ್ಮ ಬರ ಹಕ್ಕೆ ವಸ್ತು ಮಾಡಿಕೊಂಡು ತಮ್ಮ "ಕನಸಿಗೊಂದು ಕಣ್ಣ"ನಲ್ಲಿ "ಸ್ಟೆಲ್ಲಾ ಎಂಬ ಹುಡುಗಿ" ಎಂದು ಆರಂಭಿಸಿ, ಈಕೆ ಲಂಕೇಶರ ಸ್ಟೆಲ್ಲಾ ಎಂಬ ಹುಡುಗಿ ಅಲ್ಲವೇ ಅಲ್ಲಾ

ಕಲಬುರ್ಗಿ ಕಡೆ ಕುರಿಗಳನ್ನು ಸಾಗಿಸುವಂತೆ ಜನರನ್ನು ಸಾಗಿಸುವ ಬಸ್ಸಿನಲ್ಲಿ ಪ್ರಯಾಣಿಸುತ್ತಿರಬಹುದಾದ "ಸ್ಟೆಲ್ಲಾ" ಎಂಬ ಹುಡುಗಿಯ ಬಗ್ಗೆ...ಎಂದು ಅಭಿವ್ಯಕ್ತಿಗೊಳಿಸಬಹುದು ಹೀಗೆ...ನನ್ನ ಯೋಚನಾಲಹರಿಯಿಂದ ನನ್ನಷ್ಟಕ್ಕೆ ನನಗೆ ನಗುಬಂದು ತಡೆದುಕೊಳ್ಳಲಾಗದೇ ನಗತೊಡಗಿದೆ. ಸುತ್ತಲಿದ್ದವರು ಹುಚ್ಚನನ್ನು ನೋಡುವಂತೆ ಅನುಕಂಪದಿಂದ ನನ್ನೆಡೆಗೆ ದಿಟ್ಟಿಸಿ ತಮ್ಮ ಪರಿಚಿತರೆಡೆ ದಿಟ್ಟಿಸಿ ಕಣ್ಣಿನಲ್ಲೆ ಸ್ಕ್ರೂ...ಲೂಜ್ ಆದವನೆಂದು ಮಾತನಾಡಿಕೊಂಡಿರ ಬಹುದೆಂದು ಗಪ್ಪನೇ ವಾಸ್ತವಕ್ಕೆ ಬಂದೆ, ನನ್ನ ಪಕ್ಕದ ಅಜಾನುಬಾಹುವಂತು "ಪೆಕರ್"ನನ್ನು ದಿಟ್ಟಿಸುವಂತೆ ನನ್ನೆಡೆಗೆ ದಿಟ್ಟಿಸತೊಡಗಿದ ಕಿಟಕಿಯ ಕಡೆ ಕುಳಿತಿದ್ದ ಮೈಸೂರ ಕಡೆಯ ಸೂಕ್ಷ್ಮಜ್ಞನಂತು ಕುತೂಹಲದಿಂದ ಯಾಕೆ ? ಎಂದು ಮೌನದಲ್ಲೆ ಪ್ರಶ್ನೆಯನ್ನು ಮುಖದಲ್ಲಿರಿಸಿಕೊಂಡು ಕುಳಿತಿದ್ದ.

ಇಡೀ ಬಸ್ಸಿನಲ್ಲಿ ನಾನೇ ಈಗ ಪ್ರೇಕ್ಷಣಿಯ ವಸ್ತುವಾಗಿದ್ದೆ. ಯಾಕಾಗಿ ಈ ಬಂಗಾರಪ್ಪ ಹೆಗಡೆ ಲಂಕೇಶ ಇತ್ಯಾದಿಗಳನ್ನು ನೆನೆಸಿಕೊಂಡೇ ಎಂದು ನನ್ನಷ್ಟಕ್ಕೆ ನನಗೆ ಮುಜುಗರವಾಗಿ ಬೆವೆತ, ಮುಖ ಕೈ ಮೈ ಒರೆಸಿಕೊಳ್ಳಲು ಕೈ ವಸ್ತ್ರಕ್ಕಾಗಿ ಪ್ಯಾಂಟಿನ ಜೇಬಿಗೆ ಕೈ ಹಾಕಿದೆ, ಅದನ್ನೇ ಕಾದಿದ್ದವನಂತೆ ನನ್ನ ಪಕ್ಕದ ಅಜಾನುಬಾಹು ದೈತ್ಯ ಆಸಾಮಿ "ಕಡ್ಡಿ ಡಬ್ಬಿ ಆದೇನ್ರಿ ? ಎಂದು, ಇಲ್ಲವೆಂದರೆ ಅದೇನೊ ಅಪಾಯ ಮಾಡೇ ಬಿಡುವಂತೆ ಬೆದರಿಕೆಯ ಧ್ವನಿಯಲ್ಲಿ ಪ್ರಶ್ನಿಸಿದ...ಇಲ್ಲಾ ಎಂದೆ ನಿಧಾನವಾಗಿ ಧೈರ್ಯ ಮಾಡಿ ಯುಜಲೆಸ್ ಎನ್ನುವಂತೆ ಅಲಕ್ಷದಿಂದೊಮ್ಮೆ ದಿಟ್ಟಿಸಿ ಇಡೀ ಬಸ್ಸಿನ ವಿಚಿತ್ರ (ಗದ್ದಲದ ಮಧ್ಯದ) ಶಾಂತಿಯನ್ನು ಕದಕಂವವನಂತೆ ತೀರಾ ಮುಂದಿನ ಸೀಟಿನಲ್ಲಿದ್ದ ವ್ಯಕ್ತಿಯನ್ನುದ್ದೇಶಿಸಿ ಜೋರಾಗಿ "ಕಡ್ಡಿ ಡಬ್ಬಿ" ಕೊಡ್ರಿ ಎಂದಿರಚಿದ. ಆ ಧ್ವನಿ ತೀವ್ರವಾಗಿ ಸಂಚಲಗೊಂಡು ಡ್ರೈವರನಿಗೆ ಡಿಕ್ಕಿ ಹೊಡೆದಾಗ ಗಾಭರಿಯಾದ ಅವನು ಬ್ರೆಕ್ ಹಾಕಿ ಹೊರಳಿ ನೋಡಿ ನಕ್ಕು ತನ್ನ ಕೆಲಸದಲ್ಲಿ ತೊಡಗಿಕೊಂಡ. ಕೈಗಳಿಂದ ಕೈಗಳಿಗೆ ಸಾಗಿಬಂದ ಕಡ್ಡಿಡಬ್ಬಿಯಿಂದ ಕಡ್ಡಿಗೀರಿ ಚಾರ್‌ಮಿನಾರ್ ಹೊತ್ತಿಸಿ ಪುರು ಪುರು ಪುರು ಎಂದು ಹೊಗೆಯುಗಳ ತೊಡಗಿದ.

ಸೆಖೆ, ಜನರ ಬೆವರ ವಾಸನೆ, ಕಲರವ, ಜಗಳ ಚರ್ಚೆಗಳಿಂದ ಅಲ್ಲದೆ ನಮ್ಮ ಆಕ್ರಮಣದಿಂದ ಈಗಾಗಲೇ ಸಾಕಷ್ಟು ಸರಿದು ಸರಿದು ಸುಸ್ತಾಗಿ ಮೂಲೆಗುಂಪಾಗಿ ಕಿಡಕಿಗೆ ಒತ್ತಿಕೊಂಡಿದ್ದ ಮೈಸೂರ ಕಡೆಯ ಆ ಸೂಕ್ಷ್ಮಜ್ಞನಂತೂ ಈಗ ಸಿಗರೇಟ್ ಹೊಗೆಯಿಂದ ಮತ್ತಷ್ಟು ತೊಂದರೆಗೆ ಒಳಗಾದ. ಚಾರಮಿನಾರ್ ಹೊಗೆ ಯುಗಳಿನಿಂದಾಗಿ ಮಂಜು...ಮಂಜಾಗಿ ಕಾಣತೊಡಗಿದ. ಅಯ್ಯೋ ಪಾಪ ! ನಮಗಂತು (ಈ ಭಾಗದವರೆಗೆ) ಇಲ್ಲಿ ಹುಟ್ಟಿ ಬೆಳೆದು ಹೀಗೆ ತಿರುಗಾಡಿ ಇದನ್ನೆ (ಸೇವಿಸಿ) ರೂಢಿಸಿಕೊಂಡು ಬೆಳೆದು ಅಭ್ಯಾಸವಾಗಿದೆ. ಪಾಪ ! ಯಾವ ಕ್ಷಣದಲ್ಲಿ ವಾಂತಿ ಮಾಡ್ಕೊಂತಾರೋ ಎಂಬ ಯೋಚನೆಯಲ್ಲಿ ಮನಸ್ಸು ಬಿಗಿಹಿಡಿದು ಕುಳಿತು ಕಣ್ಣು ಮುಚ್ಚಿಕೊಂಡೆ.

ತುಂಬಿದ ಬಸುರಿ ತಲಿವ್ಯಾಲ ಕೊಡಹೊತ್ತು ಸಾಗಿದಂತೆ ಬಸ್ಸು ತನ್ನ ಭಾರದಿಂದ ಉಬ್ಬಸ ಪಡುತ್ತಿತ್ತು. ಅತ್ತೆಗೆ ಹೆದರಿ ನೀರು ಹೊತ್ತು ಹಾಕುವ ಅಸಹಾಯಕ ಗರ್ಭಿಣಿ ಸೊಸೆಯಂತೆ ಬಸ್ಸು ಪ್ರಯಾಸದಿಂದ ಬಿಸಿಲನ್ನು ಭೇದಿಸುತ್ತ ಓಡುತ್ತಿತ್ತು. ಓಡಿದಂತೆ ಮಾಡುತ್ತಿತ್ತು. ಎದುಸಿರು ಬಿಡುತ್ತಿತ್ತು. "ತಲಿವ್ಯಾಲಿ ಅಕ್ಕಿ ಹಾಕಿದ್ರ ಅನ್ನ ಆಗ್ತಾ ಇತ್ತು" ಅನ್ನೋ ಬಿಸಿಲಿಗೆ ತಲೆಯೊಡ್ಡಿಕೊಂಡು ಏನು ? ಆಗಿಲ್ಲವೇನೋ ಎನ್ನುವ ನಿರಮ್ಮಳದಿಂದ ಹಾಯಾಗಿ ಇದಕಿಂತ ಬೇರೆ ಸುಖವೇ ಇನ್ನಿಲ್ಲವೇನೋ ಎಂಬಂತೆ ತಮ್ಮ ತಮ್ಮ ಬೆಳೆ ಬಿತ್ತು ಬರಗಾಲ ಕುರಿತು ಮಾತನಾಡುವವರು ಹಲವರಾದರೆ, ಕೆಲವರು ಹೊಸ ನೀರು ಬಂದ ಹುಮ್ಮಸ್ಸಿನಲ್ಲಿ ವಿಹರಿಸ್ತಾ ಇದ್ದರು.

ದೂರದಿಂದ—ಎಂಬಂತೆ ನನ್ನ ಸೀಟಿನ ಕೊನೆಯ ಸ್ಥಾನದಕಡೆಯಿಂದ ವಾಯಿಕ್ ...ವಾಯಿಕ್ ಎನ್ನುವ ಕ್ಷೀಣಸ್ವರ ನನ್ನ ಊಹೆಯನ್ನು ದೃಡಿಕರಿಸತೊಡಗಿತು. ಅವರ ಮುಖನೋಡಿ ಮಜುಗರ ಉಂಟು ಮಾಡಬಾರದೆಂದು ನಿದ್ದೆ ಹತ್ತಿದವನಂತೆ ಕಣ್ಣು ಮುಚ್ಚಿಕೊಂಡಲ್ಲೆ ತೂಕಡಿಸತೊಡಗಿದೆ.

ವೀರಪ್ಪ ಪಾಟೀಲ ಹಿರೇಕೊಟ್ನೆಕಲ್

---

## ದ್ರೌಪದಿಯ ಆಲಾಪ

ಕೌರವನ ಎದುರಿನಲಿ
ದುಶ್ಯಾಸನನ ಕೈಯಲ್ಲಿ
ಬೆತ್ತಲೆಯಾಗುತ್ತಾ
ಬಂದಿದ್ದರೂ—
ಪಂಚ ಪಾಂಡವರೈವರು
ಪರಾಧೀನರಾಗಿ
ಕುಳಿತಾಗ
ಕೃಷ್ಣ ಬಂದು ಕಾಪಾಡಿದ
ಮನದೊಳಗೆ
ಕರ್ಣ ಕುಣಿಯುತ್ತಿದ್ದ.

"ಹೊಸ ದಿಕ್ಕು" ಪತ್ರಿಕೆಗೆ ಹಾರ್ದಿಕ ಶುಭಾಷಯಗಳು



ಸಾಹಿತ್ಯ ಪತ್ರಿಕೆಗಳ ಕೊರತೆ ಇರುವ ಸಂದರ್ಭದಲ್ಲಿ ಸಗರ ನಾಡಿನ ಕೇಂದ್ರ ಸ್ಥಳವಾದ ಶಹಾಪುರದಿಂದ "ಹೊಸದಿಕ್ಕು" ಎಂಬ ಸಾಹಿತ್ಯಿಕ ಪತ್ರಿಕೆಯೊಂದನ್ನು ಹೊರತರುತ್ತಿರುವ ನಿಮ್ಮ ಪ್ರಯತ್ನ ಮೆಚ್ಚುವಂಥದ್ದು ನಿಮ್ಮ ಪ್ರಯತ್ನ ಸೃಜನಶೀಲವಾಗಿರಲಿ ಈ ಭಾಗದ ಸಾಹಿತ್ಯಕ್ಕೆ ಪ್ರೇರಕವಾಗಲಿ ಎಂಬ ಆಶಯದೊಡನೆ ಪತ್ರಿಕೆಯನ್ನು ಕುತೂಹಲ ದಿಂದ ಸ್ವಾಗತಿಸುತ್ತೇನೆ.

ಶಿವಶೇಖರಪ್ಪ ಪಾಟೀಲ ಶಿರವಾರ
ಶಾಸಕರು, ಶಹಾಪುರ



---

'ಹೊಸ ದಿಕ್ಕು' ಪತ್ರಿಕೆಗೆ ಶುಭಾಶಯಗಳು

# ಜಿವ್ಡೇಶ್ವರ ಹಣಕಾಸು ಸಂಸ್ಥೆ

ಮಾರುತಿ ರಸ್ತೆ, ಶಹಾಪುರ



ಬುದ್ಧ ಮಲಗಿದ ಬೆಟ್ಟದ ಚೆಲುವು
ಈ ನೆಲದ ಸಾಹಿತ್ಯದ ಒಲವು
ಜನ ಮಾನಸದಲ್ಲಿ ಅರಳಲಿ.

ವ್ಯವಸ್ಥಾಪಕರು ಹಾಗೂ ಸದಸ್ಯರು
**ಜಿವ್ಡೇಶ್ವರ ಹಣಕಾಸು ಸಂಸ್ಥೆ**
ಶಹಾಪುರ.

---

'ಹೊಸ ದಿಕ್ಕು' ಪತ್ರಿಕೆಗೆ ಶುಭಾಶಯಗಳು

# ಸೂಗೂರೇಶ್ವರ ಹಣಕಾಸು ಸಂಸ್ಥೆ

ಮಾರುತಿ ರಸ್ತೆ, ಶಹಾಪುರ



ಬಿಸಿಲು ಬದುಕಿನ ಮಧ್ಯದ
ಜನಪದ ಜೀವನವೇ ಸಾಹಿತ್ಯವಾಗಿ
ಹೊರಬರಲಿ ಎಂದು ಹಾರೈಸುವ

ವ್ಯವಸ್ಥಾಪಕರು ಹಾಗೂ ಸದಸ್ಯರು
**ಸೂಗೂರೇಶ್ವರ ಹಣಕಾಸು ಸಂಸ್ಥೆ ಶಹಾಪುರ**

# ಅಗಲಿದ ಗೋಕಾಕ

ಕನ್ನಡ ಸಾಹಿತ್ಯ ಲೋಕದ ಹಿರಿಯ ತಲೆಮಾರುಗಳ ಕೊಂಡಿ ಒಂದೊಂದಾಗಿ ಕಳಚಿ ಹೋಗುತ್ತಿವೆ. ಮೂರು ತಿಂಗಳ ಹಿಂದೆಯಷ್ಟೇ ನಿರಂಜನ ಇಲ್ಲವಾದರು ನಿರಂಜನರ ಸಾಹಿತ್ಯಸೃಷ್ಟಿಯ ಒಪ್ಪ ಓರಣಗಳನ್ನು ಮೆಲಕು ಹಾಕುತ್ತಿರುವಾಗಲೇ ವಿನಾಯಕ ಕೃ. ಗೋಕಾಕರು ಇಲ್ಲವಾದರು ಎಂಬ ಸುದ್ದಿ ಮತ್ತಷ್ಟು ದಿಗ್ಭ್ರಮೆಯನ್ನುಂಟು ಮಾಡಿತು.

ಕನ್ನಡಕ್ಕೆ ಐದನೆಯ ಜ್ಞಾನಪೀಠ ಪ್ರಶಸ್ತಿಯನ್ನು ತಂದುಕೊಟ್ಟ ಗೋಕಾಕರು ಮೊನ್ನೆ ಮೊನ್ನೆಯವರೆಗೆ ಮನೆ ಮಾತಾಗಿದ್ದರು. ಅವರ ಬೃಹತ್ ಕಾವ್ಯ ಪ್ರಕಾರವಾದ 'ಭಾರತ ಸಿಂಧು ರಶ್ಮಿ'ಯನ್ನು ಓದುವಾಗಲೆಲ್ಲಾ ಅವರು ಬಳಸಿದ ಸಂಕೀರ್ಣ ಛಂದಸ್ಸು ನಮ್ಮ ಮನಸ್ಸನ್ನು ಹಿಡಿದಿಡುತ್ತಬೆ. ಪ್ರತಿಯೊಂದು ಯುಗದಲ್ಲಿ ಕವಿಯೊಬ್ಬ ತನ್ನ ಕಾವ್ಯ ಪ್ರಕಾರಕ್ಕೆ ರೂಪವನ್ನು ಕಂಡುಕೊಂಡಂತೆ ಕಾವ್ಯಕೃಷಿ ರಚಿಸುತ್ತಾ ಹೋಗುತ್ತಾರೆ. ಷಟ್ಪದಿಯ ರೂಪವು ಆ ಕಾಲದ ಬಹಳಷ್ಟು ಕವಿಗಳಿಗೆ ಹಿಡಿಸಿ ಅದನ್ನೇ ಹಲವಾರು ಜನರು ಪ್ರಯೋಗ ಮಾಡಿದರು. ಅದರಂತೆಯೇ ಗೋಕಾಕರು 12ನೆಯ ಶತಮಾನದ ಶರಣರ ವಚನಗಳ ದಟ್ಟ ಪ್ರಭಾವ ಇವರ ರಚನೆಯಲ್ಲಿ ಅಡಕವಾಗಿದೆ.

ಕನ್ನಡ ಕಾವ್ಯವೆಂದರೆ ಅಷ್ಟಾದಶ ವರ್ಣನೆಗಳು ಬರಲೇಬೇಕು. ಕವಿ ಸಮುದ್ರವನ್ನು ನೋಡಲಿ ಬಿಡಲಿ ಸಮುದ್ರ ವರ್ಣನೆ ಮಾಡಲೇಬೇಕು. ಇಂಥಹ ಸಂದರ್ಭದಲ್ಲಿ ಕವಿ ತನ್ನ ಕನಸಿಗೆ ರೂಪು ಕೊಡುತ್ತಾನೆ. ಇಲ್ಲಿ ವಿನಾಯಕರು ಹಾಗಾಗಿಲ್ಲ. ಇಂಗ್ಲೆಂಡಿಗೆ ಹೋಗಿದ್ದಾಗ ಅದ ಅನುಭವಗಳ ಹಿನ್ನೆಲೆಯಲ್ಲಿ ಮಾಡಿದ ವಚನಗಳೇ ಸಮುದ್ರ ಗೀತಗಳಾದವು, ಕನ್ನಡ ಸಾಹಿತ್ಯದ ಸೃಷ್ಟಿಶೀಲ ಸಂದರ್ಭದಲ್ಲಿ ಗೋಕಾಕರ ಮಹತ್ವದ ಪ್ರಯೋಗ

ಅಂಚೆಯಂತೆ ಕತ್ತರಿಸಿ ತೆರೆಗಳನು
ಚುಂಚುವಿನಂಚಿನಿಂದ
ನಮ್ಮ ನಾವೆಯಿದು ತೆರಳುತಿವೆ ನೋಡಿರೆ
ಗರಿಗಳನ್ನು ಹರಹಿ ರವಿಕಿರಣದಿ ಹೊಳೆಯುತಿರೆ
ರಾಜಹಂಸವಿದು ಮರಳುತಿದೆ ನೋಡಿರೆ !

ಈ ಒಂದು ಗೀತವನ್ನು ನೋಡಿದರೆ ವಚನರೂಪವು ನಮ್ಮ ಕಣ್ಣೆದುರಿಗೆ ಬಂದು ನಿಲ್ಲುತ್ತದೆ. ಇದು ಸಾಹಿತ್ಯವನ್ನು ಅಭ್ಯಸಿಸುವರಿಗೆ ಗೋಕಾಕರ ಪರಿಚಯವಾಗುತ್ತದೆ.

ಗೋಕಾಕ ಚಳುವಳಿ ಎಂದೇ ಹೆಸರಾದ 'ಕಡ್ಡಾಯ ಕನ್ನಡ ಕಲಿಕೆ'ಯ ವರದಿಯನ್ನು ಕೊಟ್ಟ ನಾಡಿನುದ್ದಗಲಕ್ಕೂ ಚಿರಪರಿಚಿತವಾಗಿ ಕನ್ನಡಿಗರ ನರ ನಾಡಿಗಳಲ್ಲಿ ನೆತ್ತರವನ್ನು ಹರಿಸಿದವರು ಹುರಿದುಂಬಿಸಿದವರು ಪ್ರತ್ಯಕ್ಷವಾದಿ ಅಲ್ಲದಿದ್ದರೂ ಪರೋಕ್ಷವಾಗಿ ಗೋಕಾಕರು.

ಕನ್ನಡ ಬೋಧನೆಯ ವಿಷಯ ಸಮಿತಿಗೆ ಗೋಕಾಕರನ್ನು ನೇಮಿಸಿದಾಗ 'ಗೋಕಾಕ–ಗೋ–ಬ್ಯಾಕ್' ಎಂದು ಕೂಗಿದವರುಂಟು ಅದೇ ಗೋಕಾಕರು ಕನ್ನಡದ ಪರವಾಗಿ ಎನ್ನುವುದಕ್ಕಿಂತ ಕರ್ನಾಟಕದ ಜನ ಭಾಷೆಗೆ ಮನ್ನಣೆ ಕೊಟ್ಟಿದ್ದರಿಂದ ಮುಂದೆ ಅದೇ ಜನ ಎತ್ತಿ ಮೆರದಾಡಿದರು. ಇದು ಗೋಕಾಕರ ಆರೋಗ್ಯ ಮನಸ್ಸಿನ ವರದಿಯಾಗಿದ್ದರಿಂದ ಕನ್ನಡದ ಜನ ಮನಗಳಲ್ಲಿ ಸ್ಥಿರಸ್ಥಾಯಿಯಾಗಿ ನಿಲ್ಲಬಲ್ಲರು.

ಇಂದು ಗೋಕಾಕರು ನಮ್ಮೊಂದಿಗಿಲ್ಲ ನಿಜ. ಆದರೆ! ಅವರು ಸೃಷ್ಟಿಸಿದ ಸಾಹಿತ್ಯ ನಮ್ಮ ಜೊತೆ ಇರುವಾಗ ಅವರು ಇಲ್ಲವೆಂದು ಹೇಳಲಿಕ್ಕಾಗುವುದಿಲ್ಲ. ವಿನಾಯಕರ ಸಮಗ್ರ ಕಾವ್ಯವನ್ನು ನಮ್ಮೆದುರಿಗಿಟ್ಟುಕೊಂಡು ನಾವೇನಾದರೂ ಹೊಸ ಪ್ರಯೋಗವನ್ನು ಮಾಡಿದರೆ ಅದೇ ಅವರಿಗೆ ಸಲ್ಲಿಸುವ ಶ್ರದ್ಧಾಂಜಲಿಯಾಗುತ್ತದೆ.

— ಸಂಪಾದಕ

(ಪತ್ರಿಕೆ ಪ್ರಕಟಣೆ ಕಾರ್ಯ ಮುಗಿಯುವ ಹಂತಕ್ಕೆ ಬಂದಾಗ ವಿನಾಯಕರು ಅಗಲಿದ ಸುದ್ದಿ ಬಂತು ಆ ಕಾರಣಕ್ಕಾಗಿ ಲೇಖನವನ್ನು ಮಧ್ಯದಲ್ಲಿ ಸೇರಿಸಲಾಗಿದೆ.)

ಶಿ. ರಾಜು, ದಾವಣಗೆರೆ

# ಶವ ಮತ್ತು ನೆನಪು

ಎಲ್ಲಾ ಕರಿ ಮೌನ...
ಪಿಸುಮಾತಿನ ನೆರಳಲ್ಲಿ
ಬದುಕಿಗೆ ಅರ್ಥ ಕಂಡ ಶರೀರ
ಜಡಗೊಂಡು ಶವಯಾತ್ರೆಗೆ ಸಜ್ಜುಗೊಂಡಿದೆ
ಪಿಸುಮಾತನಾಲಿಸದೆ
ದುಃಖದೋಕುಳಿಯ ಹಿಂಡು-
ದುಃಖದೊಂದಿಗೆ ಸತ್ತವಳ
ವರ್ಣನೆಯು ಸ್ವರಗಳ ಹಿಂಡು
ಇದ್ಯಾವುದೂ ಲೆಕ್ಕಿಸದೇ
ಜೀವ ತ್ಯಜಿಸಿದ ದೇಹ.
ತಂದವರ ಹಾರ-ಗಂಧ-ಕಡ್ಡಿಯ ಲೆಕ್ಕ
ಸತ್ತವಳ ಜೀವಕ್ಕೆ ಅದಾವ ಲೆಕ್ಕ ?
ಜೀವ ತೇದ ದೇಹಕ್ಕೆ
ಆದರ್ಶದ-ಅಶ್ರು ತರ್ಪಣದ ಮಾತು.
ಬದುಕಿದಷ್ಟು ಕಾಲ ಪ್ರೀತಿ ಹಂಚಿದ ಅವಳು
ಸತ್ತಾಗ ಮಾತ್ರ ನೆನಪಿನೊತ್ತಿಗೆಯ ಮಂತ್ರ
ಎಲ್ಲರೂ ಹಾಡಿ ಹೊಗಳುವರು
ಅವಳ ಬದುಕಿನುದ್ದದ ನೆನಪು
ಚಟ್ಟಕ್ಕೇರಿ–ಹೆಗಲ ಏರಿದ ಶವದ ಹಿಂದೆ
ದುಃಖಿತರ್ಪಣ-ಅಶ್ರುತರ್ಪಣದ ದಂಡು,
ಕಿಚ್ಚಿಡಿದವನ ಹೃದಯ
ಸತ್ತವಳ ನೆನಪಲ್ಲೇ ಬೆಂದು
ಕಿಚ್ಚಿನ ಬೆಂಕಿಯೊಂದಿಗೆ ನೆನಪುಗಳ ಉರಿದಂತೆ
ರುದ್ರ ಭೂಮಿಯ ದಾರಿ ತುಳಿದ
ಈಗವಳ ನೆನಪು ಮಾತ್ರ-
ಎಲ್ಲಾ ಕರಿ ಮೌನ...
ಪಿಸು ಮಾತಿನ ನೆರಳಲ್ಲಿ.
ಶವಹೊರಟ ದಾರಿಯುಲ್ಲಿ,

# ನೀರಮಾನ್ವಿ

(ಅಗಲಿದ ನೀರಮಾನ್ವಿ ವೀರಣ್ಣಗೌಡರನ್ನು ಕುರಿತು)

ನೀರಮಾನ್ವಿಯ ಮಾತು
ಹರಿವ ನೀರಿನ ಹಾಗೆ
ಒಮ್ಮೊಮ್ಮೆ ಜುಳುಜುಳುನಾದ
ಇನ್ನೊಮ್ಮೆ ಅಬ್ಬರದ ಮೊರೆತ
ಮಗದೊಮ್ಮೆ ಉಕ್ಕಿ ಹರಿಯುವ ಎಳೆತ
ಕೆಲವೊಮ್ಮೆ 'ತುಂಗಭದ್ರೆ'ಯ ಸೆಳೆತ

ಅನುಭವದ ವಯಸ್ಸು, ಮಾಗಿದ ಮುಖಕ್ಕೆ
'ನಗೆಮಾರಿ ತಂದೆ'ಯೆಂಬ ಬಿರುದು
ನೋವಿನ ಕಾವು ಒಳಗೊಳಗೆ ನುಂಗಿ
ಜ್ವಾಲಾಮುಖಿಯಂತೆ ನಗುವು ಸಿಡಿದೆದ್ದು
ಈಗ ಇತಿಹಾಸದ ಮಾತು

ಜಗವ ಸುತ್ತಿದ ಗೌಡ ಬಾಯ್ದೆರೆದರೆ
ಅದೇ ಗೌಡಿಕೆಯ ಗತ್ತು
ಧುಮ್ಮುಗುಟ್ಟುವ ಛಳಿಯಲ್ಲೂ ಮಾತಿನ ಮತ್ತು
ಬಿಸಿನೀರು ಮಿಂದು ಮರುಹುಟ್ಟು ಪಡೆದ ಹೊತ್ತು
ಮಿಂದವರಿಗೆಲ್ಲಾ ಅದರ ಸವಿ ಗೊತ್ತು

ಇವನಾರವ ಇವನಾರವ ಎನ್ನದೆ
ಇವನಮ್ಮವ ಇವನಮ್ಮವ ಎನ್ನುವ
'ಬಸವ ವಚನದ ಭಾಷೆ'
ತಿಳಿಸಿ ಹೇಳುವ ರೀತಿ
ಯಾರು ಹೇಳುವರು ಈ ಹೊತ್ತು

ಅನುಭಾವದ ಕೊಡ ಹೊತ್ತು
ಲೀಲೆಯಲಿ ಎರಕ ಹೊಯ್ದು
ವಚನ ಸಾಗರದಿ ಈಜಾಡಿ
ಮಡಿವಾಳನ ಕಾಯಕದಂತೆ
ಜನ-ಮನದ ಜಡತ್ವ ಬಡಿಸಿ
ನಾಡನ್ನೆ ಸುತ್ತಿದವನು
ವಿಚಾರದ ಕಿಡಿ ಹೊತ್ತಿಸಿದವನು

ಈ ಹೊತ್ತು ಹುಡುಕುತ್ತಿದ್ದೇನೆ ಮತ್ತೆ
ನಿನಗಾದಿ-ನಿನ್ನಂಥವರಿಗಾದಿ
ನೆರೆದ ಜನ-ಜಂಗುಳಿಯಲ್ಲಿ
ವೇದಿಕೆಗಳ ಸೂರಿನಲ್ಲಿ
ಕಾಣದಾಗಿದೆ ನಿನ್ನ ರೂಹು ಎಲ್ಲಿ
ಮತ್ತೆ ಮರುಹುಟ್ಟು ಕಾಣುತ್ತಿದ್ದೇನೆ
ನಿನ್ನಂಥವರಿಗಾದಿ ಸಾನಿಲ್ಲಿ

○

ಸಂಪಿಗೆ ನಾಗರಾಜ

---

## ಕಾವ್ಯ

ಗೆಳತಿ,

ಇಲ್ಲಿಯ ಕೆಂಪು ಕಲ್ಲುಗಳಿಗೆ
ನೂರಾರು ಕಪ್ಪು ಕತೆಗಳಿವೆಯಂತೆ
ಆದರೆ ನಿನ್ನ ಬಗ್ಗೆ ನನ್ನಾಳದಲ್ಲಿ
ಬಂಡಕಾವ್ಯದ ಝರಿಯೇ
ಹರಿಯುತ್ತಿದೆಯಲ್ಲಾ...

# ನನ್ನ ಕವಿತೆ

ನನ್ನ ಕವಿತೆ
ಹೂಗಳ ಸುಗಂಧ ಹಿಡಿದು ಹತ್ತಿ
ಸರ್ಕಸ್ಸಿನ ಹುಡುಗಿ ತಾರಿನ ಮೇಲೆ ನಡೆವಂತೆ
ಹೊರಟರೆ ತಲುಪುವುದು ಯುವತಿಯೊಬ್ಬಳು
ಮುಡಿದ ಹಿಡಿ ಹಿಡಿ ಮಿಡಿ ಮಲ್ಲಿಗೆಗಳು

ನನ್ನ ಕವಿತೆಯು
'ಶಬ್ದಗಳು' ದೊಡ್ಡದೊಡ್ಡ
ಗುಡ್ಡಗಳ ಹೆಬ್ಬಂಡೆಯು ಕೆಳಗೆ
ಒಂದಿಷ್ಟು ಜಾಗೆ ಮಾಡಿಕೊಂಡು
ಪುಟಿ ಪುಟಿದು ಏಳುವ ಮೊಳಕೆಗಳು

ನನ್ನ ಕವಿತೆಯು
'ಬಯಕೆಗಳು' ಧೊ ಧೊ ಎಂದು
ಮಳೆಬಡಿದ ಮೇಲೆ ಕಾಲಾನುಕಾಲದಿಂದ
ಬೀಳುಬಿದ್ದ ನೆಲದ ಬಿಲಗಳಿಂದ
ಬುಳಬುಳನೆ ಹೊರಹೊರಟ ಇರುವೆಗಳು

ನನ್ನ ಕವಿತೆಯು
ಸಂವಾದಗಳು' ದಟ್ಟ ಅರಣ್ಯದಲ್ಲಿ
ಆಕಾರಕ್ಕೆ ನೆಗೆದುನಿಂತ ದೊಡ್ಡ ದೊಡ್ಡ
ಮರಗಳು ಗಾಳಿಗೆ ತಲೆಮಾಗಿ
ಪರಸ್ಪರ ಹೇಳುವ ಕಿವಿಮಾತುಗಳು

ನನ್ನ ಕವಿತೆಯು
'ಭಾವನೆಗಳು' ಸುಮ್ಮನೆ ತಂಪನೆ ಗಾಳಿಗೆ
ತಮ್ಮನ್ನು ಒಡ್ಡಿಕೊಂಡು ಬಿದ್ದ
ಆದರೆ ದಾರಿಹೋಕರು ತುಳಿದರೆ
'ಬುಸ್ಸೆನ್ನುವ ಮಿಡಿ ನಾಗರ ಹಾವುಗಳು

ಗುಂಡಣ್ಣ ಚ. ಕಲಬುರ್ಗಿ

# ನೋವುಗಳೇ ನನ್ನ ಸಂಗಾತಿ

ನಲಿವುಗಳಿಗಿಂತಲೂ ನೋವುಗಳನ್ನೇ
ನಾನು ಪ್ರೀತಿಸುವುದು ಹೆಚ್ಚು,
ಗೆಲುವುಗಳಿಗಿಂತಲೂ ಸೋಲುಗಳನ್ನೇ
ನಾನು, ತೋಳಿನಲಿ ಎತ್ತಿ ಸವಾಲನ್ನಾಗಿ
ಸ್ವೀಕರಿಸುವುದು ಬಲು ಹುಚ್ಚು
ನಲಿವುಗಳ ಮಧ್ಯೆ ಬದುಕನ್ನು ನಾ
ಉತ್ಸವಿಸುವುದಿಲ್ಲ, ಕೇವಲ ನಿಂತು ಕಣ್ಣಸುತ್ತೇನೆ
ಗೆಲವುಗಳ ಗೋಪುರದೊಳಗೆ ಮಲಗಿ ನಾ
'ಅರ್ಥ' ಕಟ್ಟುವದಿಲ್ಲ;
ನನ್ನನ್ನೇ 'ನಾ' ತಟ್ಟಿ ಮುಟ್ಟಿಕೊಳ್ಳುತ್ತೇನೆ.
ನಲಿವುಗಳು ನನಗೆ ಸುಖ ನೀಡುವ ಬದಲು
ತೀರ ಸಣ್ಣವನನ್ನಾಗಿ ಮೂಲೆ ಹಿಡಿಸುತ್ತವೆ,
ಕುಬ್ಜನನ್ನಾಗಿಸಿ ನಿಂತ ನೀರಲ್ಲಿ
ಕರಗಲು ಕೈ ಮಾಡಿ ಕರೆಯುತ್ತವೆ.
ನೋವುಗಳು ಹಾಗಲ್ಲ,
ಇರುಳು ಹಗಲೆನ್ನದೇ ಕೊರಗಲು ಹಚ್ಚಿ,
ಚಿಂತನೆಯ ದೀಪ ದೂಡಿಸಿ,
ಹರಿವ ನೀರಿನ ಸೆಳವಿಗೆ
ಸರಿಯುವ ಭಾವ ಸಮುದ್ರಗುಂಟ
ತೇಲಿ ಬಿಡುತ್ತವೆ.
ಹಕ್ಕಿಯಾದಿ ಹಾರಿ ಗಗನ ಚುಂಬಿಸುವ
ಮುನ್ನ ಮುಳುವಾಗಿ
ಗೆಲುವುಗಳು ನನಗೆ
ನಸುಕಿನ ಚಿತ್ರ ಬಿಡಿಸುವ
ಎಳೆಯ ಕುಂಚಗಳ ಕತ್ತರಿಸುತ್ತವೆ,
ಬಾವು ಕೊಟ್ಟ ಕಿರು ನೆಪದಲ್ಲಿ ಕಾಲ-
ಹರಣ ಮೂಡಿಸುತ್ತವೆ.

ಸೋಲುಗಳು ಹೀಗಲ್ಲ,
ಕರಾಳ ಗರ್ಭದಲ್ಲಿ ಸಾಲು ದೀಪಗಳ ತೋರಿಸಿ
ಬದುಕ ಪಾತಳಿಯ ನಿಲುಕಿಸಿ
ಧಗ ಧಗ ಉರಿಯುವ ಕುಂಡವನ್ನು
ಶಾಂತ ಸಂತನಾದಿ ಸಂತೃಪ್ತ ರೀತಿ-
ಯಲ್ಲಿ ಪರಿಚಯಿಸುತ್ತವೆ

ಎಂ. ಕಲ್ಯಾಣರಾವ್

---

## ಮುಳ್ಳು ಕಿತ್ತು ನಡೆ

ಓದಿಗೆ ಶಾಲೆ ಆಗತ್ಯವೆ ?
ಶಾಲೆಯನ್ನು ಅರಿಯದವನು-
ತುಂಬ ಜಾಣರಾದದ್ದುಂಟು
ಒಂದು ನಿಯಮ
ಇನ್ನೊಂದು ಅಪವಾದ
ಅಪವಾದವೂ ಒಂದು ನಿಯಮಾಂಗವೆ ?
ಅವನಿಗೆ ತವಕ ಜಾಸ್ತಿ
ಹಾದಿಯಲ್ಲಿನ ಮುಳ್ಳನ್ನು
ಆತ ಕಿತ್ತು ಹಾಕಲಿಲ್ಲ
ಓಡುವ ಸಾಹಸಕ್ಕೆ ತೊಡಗಿದ್ದಾನೆ
"ಕಾಲಿನಲ್ಲೆಲ್ಲಾ ಮುಳ್ಳು ಮುರಿದ ಮೇಲೆ
ಸಹಿಸುತ್ತ ಓಡಬಾರದಿತ್ತು" ಎನ್ನುತ್ತಾನೆ.
ಆತ ಗಟ್ಟಿಗ
ನಾನು ಹೇಳಿದೆ
"ಮುಳ್ಳಿನ ಹಾದಿಯಲ್ಲಿ ಓಡುವುದು
ಗಟ್ಟಿಗತನವಲ್ಲ"
ಮುಳ್ಳು ತೆಗೆದು
ನಡೆದಾಡುವುದೇ ಗಟ್ಟಿಗತನ

ಡಾ. ಜಿ. ವಿ. ನಾಯಕ

# ಹನಿಗವನಗಳು

## ನರಿ

ನಾನು ಅವಳು
ಒಂದಾದ ಮೇಲೆ
ನಾನು ನರಿ ಆದೆ
ಅಂದಿನಿಂದ ನನಗೆ
'ಏನರಿ, ಏನರಿ'
ಎಂದು ಕರೆಯುತ್ತಾಳೆ

## ಗಲ್ಲ-ಬೆಲ್ಲ

ಗಲ್ಲದಲಿ ಬೆಲ್ಲ
ಎಲ್ಲರಿಗೆ ಗೊತ್ತಿಲ್ಲ
ಸದ್ದಿಲ್ಲದೆ ಎದ್ದು
ಮೆದ್ದವಗೆ ಬೆಲ್ಲ
ಬೆಚ್ಚನೆ ಮಲಗಿರುವ
ಪೆಚ್ಚನಿಗೆ ಬರಿ ಗಲ್ಲ

## ಅಂತರ

ಅಂದು ನಾವಿಬ್ಬರೂ
ಎಷ್ಟೊಂದು ಹತ್ತಿರ
ಇಂದು
ಮಕ್ಕಳಿಬ್ಬರು
ಮಧ್ಯಂತರ
ಮುಂದೆ
ಅಂತರವೇ
ಅಂತರ

ಹೊಸದಿಕ್ಕು ಪತ್ರಿಕೆಗೆ ಹಾರ್ಧಿಕ ಶುಭಾಶಯಗಳು



# ಮಂಡಲ ಪಂಚಾಯತ್ ಹತ್ತಿಗುಡೂರು

## ಜವಾಹರ ರೋಜಗಾರ ಯೋಜನೆಯಡಿಯಲ್ಲಿ

## ಸಾಧನೆಗಳ ಪಕ್ಷಿ ನೋಟ

- ಬೀರನೂರು, ನಂದೆಳ್ಳಿ, ಹತ್ತಿಗುಡೂರುಗಳಲ್ಲಿ ಸಮುದಾಯ ಭವನಗಳ ಕಟ್ಟಡ ಕಟ್ಟುವಿಕೆ.
- ಹತ್ತಿಗುಡೂರು ಬೀರನೂರು ಗ್ರಾಮಗಳಲ್ಲಿ ಶಾಲಾ ಕೊಠಡಿಗಳ ನಿರ್ಮಾಣ
- ಮಂನವಮಟದಿ, ನಂದಳ್ಳಿ, ಮಂಡಗಳ್ಳಿ, ಗ್ರಾಮಗಳಿಗೆ ಕಿರು ನೀರು ಪೂರೈಕೆ ಯೋಜನೆಯಡಿಯಲ್ಲಿ ನೀರು ಪೂರೈಕೆ.
- ಹತ್ತಿಗುಡೂರು, ಸಾವೂರು, ಕೊಳ್ಳೂರು, ಕಾಟಮನಳ್ಳಿ ಗ್ರಾಮಗಳಿಗೆ ಒಳ ಚರಂಡಿ ಯೋಜನೆ ಅಳವಡಿಕೆ.
- ಹತ್ತಿಗೂಡೂರು, ಕೊಂಗಂಡಿ, ಬೀರನೂರು, ಕೊಳ್ಳೂರು ಗ್ರಾಮಗಳಲ್ಲಿ ರಸೆ ನಿರ್ಮಾಣ.
- ಮಂಡಲ ವ್ಯಾಪ್ತಿಯಲಿ ಬರುವ ಎಲ್ಲಾ 12 ಗ್ರಾಮಗಳಿಗೆ ಪರ್ಸಿ ಹಾಸಿಗೆ,
- 16 ಹರಿಜನ ಗಿರಿಜನ ಬಂಧುಗಳಿಗೆ ಜಿಂಕ್ ಶೀಟ್‌ಗಳ ವಿತರಣೆ

**ಗುರಣ್ಣ**
ಕಾರ್ಯದರ್ಶಿ

**ಮಾಣಿಕರಡ್ಡಿ ಸಾಹು**
ಮಂಡಲ ಪ್ರಧಾನ ಹತ್ತಿಗುಡೂರು

---

# ಈ ಸಂಚಿಕೆಯ ಲೇಖಕರು

ಡಾ. ವಿ. ಜಿ. ಪೂಜಾರ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ

ಪ್ರೊ. ಎಸ್. ಎಸ್. ಹಿರೇಮಠ ಎ. ಡಿ. ಕಾಲೇಜ್ ಹರಪನಹಳ್ಳಿ

ಸಿದ್ಧರಾಮ ಹೊನ್ಕಲ್ ದಿಗ್ಗಿ ಬಿಲ್ಡಿಂಗ್ ಶಹಾಪುರ

ರಾಜಶೇಖರ ಪಾಟೀಲ ಅಂಚೆ ಭಂಕೂರ ತಾ. ಚಿತ್ತಾಪುರ

ರಂಗರಾಜು ವನದುರ್ಗ ಸ. ಪ್ರ. ದರ್ಜೆ ಕಾಲೇಜ ಶಹಾಪುರ

ವಿಠ್ಠಪ್ಪ ಗೋರಂಟ್ಲಿ ಲಂಕೇಶ ಪತ್ರಿಕೆ ವರದಿಗಾರರು ಅಂಚೆ ಭಾಗ್ಯನಗರ ತಾ|| ಕೊಪ್ಪಳ

ಪ್ರೊ. ಗುಂಡಣ್ಣ ಚ. ಕಲಬುರ್ಗಿ ಮೂಡಲಗಿ ಬೆಳಗಾವಿ ಜಿಲ್ಲೆ

ಡಾ. ಜಿ. ವಿ. ನಾಯಕ ದರ್ಗಾ ರಸ್ತೆ ಗುಲಬರ್ಗಾ

ಕಲ್ಯಾಣರಾವ ಶಹಾಬಾದ ಎ, ಬಿ. ಎಲ್. ಕಾಲನಿ ಶಹಾಬಾದ

ಶೋಭಾ ಸಂಗೂಪ ಶ್ರೀರಂಗಪಟ್ಟಣ

ವೀರಪ್ಪ ಪಾಟೀಲ್ ಕೆ. ಎಸ್. ಆರ್. ಟಿ. ಸಿ. ಡಿಪೋ ಶಹಾಪುರ

ವಾಸುದೇವ ಸೇಡಂ ಗುಲ್ಬರ್ಗಾ ವಿಶ್ವವಿದ್ಯಾಲಯ ಗುಲ್ಬರ್ಗಾ

ಕಾಶೀನಾಥ ಅಂಬಲಗೆ ಉಪನ್ಯಾಸಕರು ಎಸ್. ಬಿ. ಕಾಲೇಜ ಗುಲ್ಬರ್ಗಾ

ಗೌತಮ ತಿಮ್ಮಾಪುರಿ ಅಂಚೆ ರಂಗಪೇಟ ತಾ॥ ಸುರಪುರ

ಬಾಪುಗೌಡ ಶಾಡಲಗೇರಿ ಪಿ. ಜಿ. ಸೆಂಟರ ಸೊಂಡುರು (ಬಳ್ಳಾರಿ)

ಭಾಲಚಂದ್ರ ಜಯಶೆಟ್ಟಿ ಜಯನಗರ ಕಲಬುರ್ಗಿ

ಗುರುಬಸವಯ್ಯ ಅಮ್ಮಾಪುರ ಅಂಚೆ ಅಮ್ಮಾಪುರ ತಾ॥ ಸುರಪುರ

ಬಸಪ್ಪ ಗೊಡ್ರಿಹಾಳ ಯು.ಕೆ.ಪಿ. ಭೀಮರಾಯನಗುಡಿ ತಾ॥ ಶಹಾಪುರ

ರೇವತಿ ಉಪ್ಪಿನ ಚೇತನ ಪ್ರಿಂಟರ್ಸ್ ಶಹಾಪುರ

ಪಾ. ಟಿ. ಅರಕೇರಿ ಚ. ಬ, ಪ್ರೌಢಶಾಲೆ ಶಹಾಪುರ

ಚಂದ್ರಶೇಖರ ಆನೇಗುಂದಿ ಆನೆಗುಂದಿ ಓಣಿ ಶಹಾಪುರ

ಚಂದ್ರಕಾಂತ ಕರದಳ್ಳಿ ಶಹಾಪುರಪೇಟೆ ಶಹಾಪುರ

ಶಿ. ರಾಜು ವರದಿಗಾರರು ಪ್ರಜಾಕೂಗು ದಾವಣಗೇರಿ

# ಹೊಸದಿಕ್ಕು

## ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆ

ಸಂಪುಟ ೧ ಸಂಚಿಕೆ ೧ ೧೯೯೨

ಸಂಪಾದಕ : ತಿಮ್ಮಯ್ಯ ಪುರ್ಲೆ

ಸಲಹೆ : ಸೂಗಯ್ಯ ಹಿರೇಮಠ ಚಂದ್ರಕಾಂತ ಕರದಳ್ಳಿ ಎಸ್. ಬಿ. ಹೊನ್ಕಲ್

---



---

Printed Matter Book ಪ್ರವೇಶ-ಅಂಚೆ

ಶ್ರೀಮಾನ್ ಡಾ|| — ಸಿದ್ಧಲಿಂಗ ಪಟ್ಟಣಶೆಟ್ಟಿ

ಧಾರವಾಡ — ೫೮೦೦೦೪







ಪ್ರಕಾಶಕರು : ತಿಮ್ಮಯ್ಯ ಪುರ್ಲೆ ಶಹಾಪುರ 585223 (ಕಲಬುರ್ಗಿ)

ಮುದ್ರಕರು, ಗ್ರಿನೋಬಲ್ಸ ಪ್ರಾ. ಲಿ. ಗುಲಬರ್ಗಾ